ಜೂನ್ 1982, ಬೆಲೆ : 50 ಪೈಸೆ
ಸಂಪುಟ :6 ಸಂಚಿಕೆ : 10–11

# ಪಂಚಮ



## ಕೊಡಗಿನ ಕತ್ತಲೆಯಲ್ಲಿ 'ಆತ್ಮಹತ್ಯೆ' ಎಂಬ ಭೀಕರ ಕೊಲೆ

ಇಂಡಿಯಾದಲ್ಲಿ ದಲಿತರ ಕೊಲೆಗಳು ಕೊಲೆಗಳಾಗದೆ ಆತ್ಮಹತ್ಯೆಗಳಾಗಿ ಮಾರ್ಪಾಟಾಗುತ್ತಿರುವುದಕ್ಕೆ ಇತ್ತೀಚಿನ ನಿದರ್ಶನಗಳಲ್ಲಿ ಕೊಡಗು ಜಿಲ್ಲೆಯ ಕೊಡ್ಲಿಪೇಟೆಗೆ ಸಮೀಪದ ದೊಡ್ಡಕುಂದ ಗ್ರಾಮದ ದಲಿತ ಪುಟ್ಟಸ್ವಾಮಿಯ ಕೊಲೆಯೂ ಒಂದಾಗಿದೆ.

ಈ ಕೊಲೆ ''ಆತ್ಮಹತ್ಯೆ'' ಎಂದು ಕರೆಯಲ್ಪಡುತ್ತಿರುವುದಕ್ಕೆ ಜಾತಿ, ಹಣ, ಪೋಲೀಸರು, ವೈದ್ಯರು, ಕಾನೂನು, ಸರ್ಕಾರ ಇತ್ಯಾದಿಗಳೆಲ್ಲಾ ಕಾರಣವಾಗುತ್ತಿವೆ.

21 ವರ್ಷದ ಪುಟ್ಟಸ್ವಾಮಿ ಮದುವೆಯಾಗಿದ್ದ. ಹೆಂಡತಿಯೂ ಸೇರಿದಂತೆ 7 ಜನರ ಸಂಸಾರವನ್ನು ಅವನು ನೋಡಿಕೊಳ್ಳಬೇಕಾಗಿತ್ತು. ಮದುವೆಗೆ ಅಂತ ಕೊಡ್ಲಿಪೇಟೆಯ ದೊಡ್ಡಕುಳ ಜಾಫರ್ ಸಾಬ್‌ರಿಂದ 1000

(13ನೇ ಪುಟಕ್ಕೆ)



# ದಲಿತ ಕಲೆಯ ನೋವು ಅವಮಾನಗಳ ಘರ್ಜನೆ!

ಕೋಲಾರದ ಕಠೋರ ರಸ್ತೆಗಳನ್ನು ದಲಿತ ಕಲಾಮಂಡಳಿಯ ಕಲಾಗುಡು ತಮ್ಮಟೆ ನಡುಗಿಸಿತು. ಮೇ 6 ರಂದು ದಲಿತ ಸಂಘರ್ಷ ಸಮಿತಿಯು ನಡೆಸಿದ ಕಲಾಮೇಳ ಕೋಲಾರದ ಬೀದಿಯಲ್ಲಿ ಸುಡು ಬಿಸಿಲಲ್ಲಿ ಹರಿದಾಗ, ಭಾವೋದ್ವೇಗ ಮತ್ತು ಮಾನವೀಯತೆ ಒಗ್ಗೂಡಿ ಚಲಿಸಿದಂತಿತ್ತು. ಸುಮಾರು ಮುನ್ನೂರು ತಮ್ಮಟೆ, ಯಬ್ರಾ, ಇತ್ಯಾದಿ ಗಂಡುವಾದ್ಯಗಳು ಒಮ್ಮೆಗೆ ಮಾತಾಡಿದಾಗ ಅದು ಕಣ್ಣಿಗೆ ಕೇವಲ ಚಂದದ ನೋಟವಾಗಿರಲಿಲ್ಲ. ಅದು ನೋವು ಅವಮಾನಗಳು ಬೆರೆತು ಗರ್ಜಿಸಿದಂತಿತ್ತು. ಸುಲಿಗೆಗಾರರ ಎದೆಗೆ, ಮುಂದೆ ಹೊಡೆಯುವ ಸಿಡಿಲಿಗೆ ಮೊದಲು ಬರುವ ಗುಡುಗಿನಂತಿತ್ತು. ನಮ್ಮ ದಲಿತ ಕಾಲುಗಳಿಗೆ ಹುಲಿವೇಷ ಬಿಜಲಿ ಕುಣಿತ ಸಿಕ್ಕಿ ನೆಲವೂ ನಡುಗಿತ್ತು. ಅಂಬೇಡ್ಕರರ ಕನಸನ್ನು ನನಸು ಮಾಡುವ ಮೊಳಕೆಯಾಗಿ ನಡೆದ ಈ ದಲಿತ ಕಲಾಮೇಳದ ಕೆಲವು ಚಿತ್ರಗಳಿವು. ಕೆಳಗಡೆಯ ಮೊದಲ ಚಿತ್ರದಲ್ಲಿರುವವರು : ಪ್ರಜಾವಾಣಿಯ ಪ್ರಮುಖ ವರದಿಗಾರರಾದ ಇಂಧೂದರ ಹೊನ್ನಾಪುರ, ಕರ್ನಾಟಕ ದಲಿತ ಸಂಘರ್ಷ ಸಮಿತಿ ಸಂಚಾಲಕರಾದ ಬಿ.ಕೃಷ್ಣಪ್ಪ ಮತ್ತು ಖ್ಯಾತ ದಲಿತ ಕವಿ ಸಿದ್ದಲಿಂಗಯ್ಯ. ಕಣ್ಣಾರೆ ವರದಿಗೆ 8 ಮತ್ತು 9ನೇಪುಟ ನೋಡಿರಿ.

# ಮಾನಸಗಂಗೋತ್ರಿ ಎಂಬ ಕರಾಳ ಜಾತಿ ಗಂಗೋತ್ರಿ

ಮೈಸೂರಿನ ಸ್ನಾತಕೋತ್ತರ ಕೇಂದ್ರಕ್ಕೆ ರಾಷ್ಟ್ರ ಕವಿ ಕುವೆಂಪು "ಮಾನಸಗಂಗೋತ್ರಿ" ಎಂದು ನಾಮಕರಣ ಮಾಡಿದವರು. ಬುದ್ಧಿ ಜೀವಿಗಳು, ಬಂಡಾಯಗಾರರು, ವಿಚಾರವಾದಿ ಗಳನ್ನು ನೂರಕ್ಕೆ ಒಂದರಷ್ಟು ಸೃಷ್ಟಿಸುವ ಈ ತಾಣ ನೂರಕ್ಕೆ ತೊಂಬತ್ತೊಂಬತ್ತರಷ್ಟು ಜಾತಿವಾದಿಗಳನ್ನು ಹೆಡ್ಡರನ್ನು ಸೃಷ್ಟಿಸುತ್ತದೆ. ಈ ಸುಂದರ ತಾಣ ಮೇಲ್ಜಾತಿ ಎನಿಸಿಕೊಂಡವರ ಮತ್ತು ಹೇರಳ ಹಣ ಹೊಂದಿರುವವರ ಪಾರಪತ್ಯಕ್ಕೆ ಒಳಗಾಗಿದೆ.

ಬಡವಿದ್ಯಾರ್ಥಿಗಳು, ದಲಿತ ವಿದ್ಯಾರ್ಥಿಗಳ ಪಾಲಿಗೆ ಗಂಗೋತ್ರಿ ಒಂದು ಕರಾಳ ಸ್ಥಳ. ಯಾರು ತಪ್ಪು ಮಾಡಿದರೂ ದಲಿತ ವಿದ್ಯಾರ್ಥಿಗಳನ್ನೇ ಕೈತೋರಿಸಿ ಕೀಟಲೆ ಮಾಡುವುದು ಇಲ್ಲಿನ ಮುಖ್ಯ ಲಕ್ಷಣ. ಇದಕ್ಕೆ ಎರಡು ನೈಜ ಉದಾಹಣೆಗಳನ್ನು ನೀಡುತ್ತಿದ್ದೇನೆ.

ಗಂಗೋತ್ರಿಯ ಪಠ್ಯೇತರ ಚಟುವಟಿಕೆಯ ಸಮಿತಿಯು ವರ್ಷದಲ್ಲಿ ವಿದ್ಯಾರ್ಥಿಗಳಿಗಾಗಿ

**ಹೆಚ್. ಎಸ್. ರಾಜೇಂದ್ರಸಿಂಗ್**

"ಪ್ರತಿಭಾ ಪ್ರದರ್ಶನವೊಂದನ್ನು ಏರ್ಪಡಿಸಿರುತ್ತದೆ (ಮೂರುದಿನಗಳು). ಅಂತಹದೊಂದು ಪ್ರತಿಭಾಪ್ರದರ್ಶನ ಈ ವರ್ಷವು ಮಾನವೀಯ ಸಭಾಂಗಣದಲ್ಲಿ ನಡೆಯುತ್ತಿತ್ತು. ಅಲ್ಲಿನ ದೃಶ್ಯ ನೋಡಿದವರಿಗೆ ಬೆಂಗಳೂರಿನ ಹುಚ್ಚಾಸ್ಪತ್ರೆಯೇ ವಾಸಿಯೆನೋ ಎನಿಸಿದರೆ ಆಶ್ಚರ್ಯವಿಲ್ಲ. ಹೆಣ್ಣು ಮಕ್ಕಳ ಹಿಂಬಾಗ ಮುಂಭಾಗಗಳನ್ನು ಹಿಸುಕಿ ಆನಂದ ಪಡುವುದಕ್ಕೆ ವಿದ್ಯಾರ್ಥಿಗಳಿಗೆ ಇದೊಂದು ಸದವಾಕಾಶ. ಕಾರು, ಸ್ಕೂಟರ್ ಹೊಂದಿರುವ ಶ್ರೀಮಂತ ವಿದ್ಯಾರ್ಥಿಗಳು ಯಾವ ಮುಲಾಜಿಲ್ಲದೆ ಮುಂದುಗಡೆ ಸೀಟುಗಳಲ್ಲಿ ರಘಾಂಡ ಹೂಡಿರುತ್ತಾರೆ. ಕಾಗದದಲ್ಲಿ ರಾಕೇಟುಗಳನ್ನು ಮಾಡಿ ವೇದಿಕೆಯ ಮೇಲೆ ತೂರಿ ಪ್ರದರ್ಶನ ನೀಡುತ್ತಿರುವರಿಗೆ ಬೆವರಿಳಿಯುವಂತೆ ಮಾಡುತ್ತಿರುತ್ತಾರೆ. ಈ ಮಧ್ಯೆ ಯಾವನಾದರೂ ದಲಿತ ವಿದ್ಯಾರ್ಥಿ ಹೆಣ್ಣು ಅಲ್ಲಿ ಮಕ್ಕಳ ಪಕ್ಕದ ಸಾಲಿನಲ್ಲಿ ಕುಳಿತಿದ್ದರೆ ಸವರ್ಣೀಯ ಹುಡುಗರು ಕೆಕ್ಕರಿಸಿ ನೋಡುತ್ತಾ ಶೀಟಿ ತೆಗೆಯುತ್ತಾರೆ. ಈ ವರ್ಷದ ಪ್ರತಿಭಾಪ್ರದರ್ಶನವನ್ನು ಉದ್ಘಾಟಿಸಲು ಬಂದಿದ್ದ ಒಬ್ಬ ಬ್ರಾಹ್ಮಣ ಡಾಕ್ಟರೊಬ್ಬ ಭಾಷಣದುದ್ದಕ್ಕೂ ಬ್ರಾಹ್ಮಣಿಕೆಯನ್ನೇ ಹೇಳಿ ಹೊರಬಂದು.

"ಏನ್ರಿ ಈ ಹುಡುಗರು -ಮಾತನಾಡೋಕ್ಕೆ ಅವಕಾಶ ಕೊಡೋಲ್ಲಾ? ಪಿ. ಜಿ. ಲೆವಲ್‌ಗೆ ಬಂದಿದ್ರು ಇವರಿಗೆ ನಡವಳಿಕೆನೇ ತಿಳಿದಿಲ್ಲ, ಎಂದಾಗ ಕೆಲವು ಸವರ್ಣಿಯ ಹೈಕಳು "ಆ ಹರಿಜನ ಹುಡುಗ್ರುದೆ ಸಾ ಗಲಾಟೆ ಕಿರುಚಿ ರಾಕೇಟು ಹೊಡೆಯೋರು ಅವರೇ!" ಎಂದುತ್ತರ ನೀಡುತ್ತಿದ್ದರು.

ಹೋಳಿ ಹಬ್ಬ ಬಂದರಂತೂ ಇಲ್ಲಿನ ಹಣವಂತ ತಿಕ್ಕಲು ಹೈಕಳಿಗೆ ಖುಷಿಯೋ ಖುಷಿ. ಮೈಕೈಗೆ ಬಣ್ಣಬಳಿದುಕೊಂಡು ವಿದ್ಯಾರ್ಥಿನಿಯರ ನಿಲಯದ ಬಾಗಿಲಿನಲ್ಲಿ, ಬಸ್‌ಸ್ಟಾಪಿನಲ್ಲಿ ಹೆಣ್ಣುಮಕ್ಕಳು ಬರುವುದನ್ನೇ ಕಾಯುತ್ತಿದ್ದು ಹೆಣ್ಣುಮಕ್ಕಳನ್ನು ಅಟ್ಟಿಸಿಕೊಂಡು ಹೋಗಿ ಎದೆಗವಚಿ ಕೊಂಡು ಬಣ್ಣಬಳಿಯುತ್ತಿದ್ದರು. ಅದೇ ಸಮಯಕ್ಕೆ ಬಾಟನಿ ಇಲಾಖೆಯಿಂದ ಹೊರಬಂದ ಇಬ್ಬರು ಉಪನ್ಯಾಸಕರಲ್ಲಿ ಒಬ್ಬ "ಏನ್ರಿ ಈ ಬಡ್ಡಿ ಹೈಕಳಿಗೆ ಬಂಧಿರೋ ರೋಗ ಹೆಣ್ಣುಮಕ್ಕಳನ್ನು ಆ ರೀತಿ ತಬ್ಬಿಗೊಳ್ತಿದ್ದಾರಲ್ಲಾ" ಎಂದ.

ಇನ್ನೊಬ್ಬ : "ಅದೇ ಸಾರ್ 'ಆದಿಕರ್ನಾಟಕದ' ಹಾಗೆ ಹೀಗೆ ಅಂತ ಸೀಟು ತಕ್ಕೊಂಡು, ಬಿಟ್ಟಿ ತಿಂದುಬಿಡುತ್ತವೆ ಹಿಂಗ್ ಆಡ್ತಾವೆ" ಎಂದ.

ಸುತ್ತ ನಿಂತಿದ್ದ ಏಳೆಂಟು ಜನ ವಿಜ್ಞಾನದವರು" "ಕರೆಕ್ಟ್ ಕರೆಕ್ಟ್" ಎಂದು ತಲೆಯಲ್ಲಾಡಿಸಿದರು.

ನನ್ನ ಮನಸ್ಸಿಗಂತೂ ನೋವಾಯಿತು. "ಇವರ ಹೆಂಡಂದಿರಿಗೆಲ್ಲ ಮಕ್ಕಾಳಾದಾಗ ಯಾರ ಮೇಲೆ ಹೇಳುತ್ತಾರೊ?" ಎಂದುಕೊಂಡೆ.

ದಲಿತ ವಿದ್ಯಾರ್ಥಿಗಳಷ್ಟೆ ಅಲ್ಲ ದಲಿತ ಉಪನ್ಯಾಸಕರು ಕೂಡ ಈ ಜಾಗದಲ್ಲಿ ಅಸ್ಪೃಶ್ಯರಾಗಿಯೇ ಹೇಗೆ ಉಳಿದುಕೊಳ್ಳುತ್ತಾರೆ ಎಂಬುದಕ್ಕೆ ಈ ಕೆಳಗಿನದು ಒಂದೇ ಒಂದು ಉದಾಹರಣೆ ಸಾಕು.

ಇಲ್ಲಿನ ಭೂಗೋಳ ಇಲಾಖೆಯಲ್ಲಿ ದಕ್ಷವಾಗಿ ಕೆಲಸ ಮಾಡುತ್ತಿರುವ ಡಾ॥ಬಿ.ಚಿ. ನಾಗರಾಜು, ಬಹಳ ಒಳ್ಳೆಯ ಉಪನ್ಯಾಸಕರು. ದಲಿತರು ಪಿ.ಎಚ್.ಡಿ ಪ್ರವೇಶ ಪಡೆಯುವುದೇ ಕಷ್ಟವಾಗಿರುವಾಗ ಪಿ.ಎಚ್.ಡಿ ಮಾಡಿ ಹತ್ತೆಂಟುವರ್ಷಗಳಾದರೂ ಇವರನ್ನು ಉಪನ್ಯಾಸಕರಾಗೇ ಉಳಿಸಿಕೊಂಡು ಬರಲಾಗುತ್ತಿದೆ. ಇವರ ಅರ್ಹತೆಗೆ ಇವರು ಪ್ರೊಫೆಸರ್ ಆಗಬೇಕಿತ್ತು. ಇವರು ದಲಿತಜನಾಂಗಕ್ಕೆ ಸೇರಿದ್ದರಿಂದ ಸಂದರ್ಶನವನ್ನು ತಡೆಯಿಡಿದು ಮೊನ್ನೆ ಮೊನ್ನೆ ರೀಡರ್ ಹುದ್ದೆಯಿಂದ ಇವರನ್ನು ವಂಚಿಸಿ ಸವರ್ಣೀಯನೊಬ್ಬನಿಗೆ ಇದು ದಕ್ಕುವಂತೆ ಇಲ್ಲಿನ ಜಾತಿಜಿಡ್ಡಿನ ವಿ.ಸಿ. ಪ್ರೊಫೆಸರ್‌ಗಳು ಇಕ್ಕೃತ್‌ಮಾಡಿದರು.

## ಕೈಯೆತ್ತಿ ತೋರುತಾನೆ

ನಮ್ಮೂರ ನಟ್ಟ ನಡುವೆ ಜೋಡುದಾರಿ ಒಡುವಲ್ಲಿ
ಹುಗಿದಿದ್ದಾರು ಭೀಮರಾಯನ ಕಂಚುದೇಹ.
ಹಿಂದೆ ನಿಂತಿದೆ ನ್ಯಾಯ ಸುಳ್ಳುಗಾರರ ಮಹಲು
ಎದುರಿಗೆ ಮುಗಿಲೆತ್ತರ ಕಳ್ಳರ ಸೌಧ

ಬೆನ್ನ ಮಾಡಿ ಹೇಳ್ತಾನೆ ತಕ್ಕಡಿ ಪರಟೆಗಳೆಲ್ಲ
ಪಲ್ಟಿಹೊಡೆದು ಮೇಲಕೆಳಗೆ ತೂರಿದ್ದಾಂತ್ರಿ,
ಕೈಯೆತ್ತಿ ತೋರುತ್ತಾನೆ ಬಾಬಾ ಸಾಹೇಬ ಬೆರಳು
ಕೊಳ್ಳಿಹೊಡೆವ ಮಂದಿ ಇಲ್ಲಿ ಕೂಡಿದ್ದಾವು.

ಕಳ್ಳಸಾಗಣೆಯಲ್ಲಿ ಮಾಮೂಲಿ ಬಂದದುಡ್ಡು
ಮೂರ್ತಿ ಮಾಡಿದ ಮಾರಾಯಗೆ ನೀಡಿದಾರು,
ಬಾಬಾ ಸಾಹೇಬನಿಗೆ ಹಾರುವ ಮುಖ್ಯನಿಂದ
ಹಾರಾಹಾಕಿಸಿ ಮಂತ್ರ ಹೇಳಿದಾರು.

ದಲಿತರ ಮಂತ್ರಿ ಬಂದು ಬಾಬಾಭಾಷಣ ಮಾಡಿ
ಸೇಂದಿಕುಡಿದು ಅಲ್ಲಿಹೋಗಿ ಕಾರಿಕೊಂಡ;
ದಲಿತರ ಭೂಮಿಯನ್ನು ಬಾಚಿದ ಗೌಡನೊಬ್ಬ
ಭೀಮ ಪಾದಕೆ ಬಿದ್ದು ಜಾರಿಕೊಂಡ

ಪಕ್ಕದ ಹಚ್ಚಹಸುರು ಚಿಗುರು ಮರದ ನೆರಳಿನಲ್ಲಿ
ಮಲಗಿದಾಳೋ ಚಂದ ದಲಿತ ಹೆಣ್ಣುಮಗಳು,
ಬಣ್ಣದವರು ಬರಗಿ ಹಿಡಿದು ಭೀಮರಾಯರ
ಕಟ್ಟೆಮೇಲೆ
ಕುಡಿದು ಹೋದರು ಅವಳ ಬೆಳದಿಂಗಳು

ಬಾಬಾ ಸಾಹೇಬ ತನ್ನ ಕಾಲಲ್ಲೆ ಗೋಳುಕಂಡು
ಬಡಕೊಂಡ ಬಾಯಿ ಬಾಯಿ ಬಿಡಲಾರದೆ;
ಆಕಾಶ ಬಿರಿದಂತೆ ಕಪ್ಪುಕೊರಳುಗಳೆಲ್ಲ
ಕೂಗಿ ಕರೆದಂ ಧರಣಿ ಮಾಡಿ ಎಡೆಬಿಡದೆ.

ಕೂಗಿನ ಸಿಡಿಲೊಂದು ಮುಗಿಲ ಮಹಲು ಒದ್ದಾಗ
ಬಂದಾವೋ ಬಂದೂಕು ಡಂ ಡಂಮಿಸಿ;
ದಲಿತರ ಹೆಣದ ಮಧ್ಯ ಗುಂಡು ಹಿಡಿದು ನಿಂತಾನೊ.
ಬಾಬಾ ಸಾಹೇಬ ರಕ್ತ ರಣರಣಿಸಿ

**— ಜಯರಾಮ ಹೆಗಡೆ**

**ಆಡಿನ ಬಾಡಿಗೆ ಪ್ರಸಿದ್ಧವಾದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮನುಷ್ಯರ ಬಾಡೂ ಅಗ್ಗವಾಗತೊಡಗಿದೆ. ಮನುಷ್ಯರ ರಕ್ತ-ಮಾಂಸದ ರುಚಿಯಿಡಿದಿರುವ ಇಲ್ಲಿನ ಜಮೀನ್ದಾರರು ಮತ್ತು ಅವರ ಕಾಲುನೆಕ್ಕುವ ಪೋಲೀಸರಿಗೆ ಎಲ್ಲಾ ಅಸಹಾಯಕರ ಉಸಿರಾಗಿ ಬೆಳೆಯುತ್ತಿರುವ ದಲಿತ ಸಂಘರ್ಷ ಸಮಿತಿಯು ಮುಳ್ಳಾಗಿ ಕಾಡತೊಡಗಿದೆ. ನೊಂದವರು ನ್ಯಾಯ ಕೇಳತೊಡಗಿದಂತೆ ಉಳ್ಳವರ ಕಣ್ಣು ಕೆಂಪಾಗತೊಡಗಿದೆ. ಮಲೆನಾಡಿನ ಹಸಿರು ಕತ್ತಲೆಯಲ್ಲಿ ಉಸಿರು ಕಳಕೊಂಡಿರುವ ದಲಿತರಿಗೆ ಮತ್ತು ಎಲ್ಲಾ ಅಸಹಾಯಕರಿಗೆ ಬೆಳಕು ಕಾಣಿಸಲು ತನ್ನ ಜೀವ ಪಣ ಇಟ್ಟು ಹೋರಾಡುತ್ತಿರುವ ಗಂಗಯ್ಯನಂಥ ದಿಟ್ಟಮನುಷ್ಯನ ಮೇಲೆ ಇತ್ತೀಚೆಗೆ ಮೂಡಿಗೆರೆ ಪೋಲೀಸರು ನಡೆಸಿದ ಅಮಾನುಷ ಹಲ್ಲೆಯ ವಿವರಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಜಾತಿ, ಹಣ, ಭೂಮಿ ಇತ್ಯಾದಿಗಳಿಂದ ಕೊಬ್ಬಿರುವವರ ಪಾಲಿಗೆ ಸಿಂಹ ಸ್ವಪ್ನದಂತೆ ದಲಿತ ಸಂಘಟನೆ ಕಟ್ಟುತ್ತಿರುವ ದಲಿತ ಸಂಘರ್ಷ ಸಮಿತಿ ರಾಜ್ಯಸಂಚಾಲಕರಲ್ಲಿ ಒಬ್ಬರಾದ ಶ್ರೀ ಎಂ.ಡಿ. ಗಂಗಯ್ಯನವರು ತಮ್ಮ ಮೇಲೆ ನಡೆದ ಹಲ್ಲೆಯ ಬಗ್ಗೆ ಸ್ವತಃ ಇಲ್ಲಿ ವಿವರಿಸಿದ್ದಾರೆ. ದಬ್ಬಾಳಿಕೆಯ ವಿರುದ್ಧ ದಲಿತ ಸಂಘರ್ಷ ಸಮಿತಿಯ ಹೋರಾಟ ಮುಂದುವರಿದಿದೆ.**



ಎಂ.ಡಿ. ಗಂಗಯ್ಯ

# ಹೋರಾಟದ ದಿಟ್ಟಮನುಷ್ಯ ಗಂಗಯ್ಯನ ಮೇಲೆ ಹಲ್ಲೆ: ರಕ್ತದ ರುಚಿಯಿಡಿದ ಪೋಲೀಸರು

ಮೂಡಿಗೆರೆ ತಾಲ್ಲೂಕಿನ ಜೋಗಣ್ಣಕೆರೆ ಗ್ರಾಮದ ಸರ್ವೆ ನಂ ೧೯೦/೧೯೧ರ ಸರಕಾರಿ ಭೂಮಿಯನ್ನು ೧೯೭೭–೭೮ನೇ ಸಾಲಿನಲ್ಲಿ ಈ ಗ್ರಾಮದ ನಿರ್ಗತಿಕ ದಲಿತರಿಗೆ ಮನೆ ನಿವೇಶನಕ್ಕೆ ಸರಕಾರದಿಂದ ಮಂಜೂರಾಗಿದ್ದು, ೧೮ಮನೆಗಳನ್ನು ಕಟ್ಟಿಕೊಡಲಾಗಿದೆ ಮತ್ತು ಇನ್ನುಳಿದ ಹದಿನೈದು ಜನರು ಸರಕಾರಕ್ಕೆ ಅರ್ಜಿ ಹಾಕಿ ಮಂಜೂರಾತಿಗಾಗಿ ಕಾಯುತ್ತಿದ್ದರು. ಈ ನಡುವೆ ಇದೇ ಊರಿನ ರಾಮಚಂದ್ರಪ್ಪಗೌಡ ಎಂಬಾತ ಬೆಂಗಳೂರು ಕಾಫಿ-ಬೋರ್ಡ್ ಲೀಗಲ್ ಅಡ್ವೈಸರ್ ಆಗಿ ಸಾವಿರಾರೂ ರೂ. ಸಂಬಳ ಪಡೆಯುತ್ತಾನೆ. ಈತ ಬೆಂಗಳೂರಲ್ಲಿ ಇದ್ದುಕೊಂಡು ಇಲ್ಲಿನ ರೆವಿನ್ಯೂ ಅಧಿಕಾರಿಗಳೊಂದಿಗೆ ಶಾಮೀಲಾಗಿ ದಲಿತರಿಗೆ ಮಂಜೂರಾಗಬೇಕಿದ್ದ ನಿವೇಶನದ ಜಾಗವನ್ನು ತನ್ನ ಹೆಸರಿಗೆ ಮಾಡಿಸಿಕೊಂಡು ಬಿಟ್ಟ. ಇವೆಲ್ಲವೂ ರೆವಿನ್ಯೂ ಅಧಿಕಾರಿಗಳ ಎಂಜಲು ಕೃತ್ಯದಿಂದ ನಡೆದದ್ದು.

**ಬೇಲಿಯ ಮೇಲೆ ಗುಡಿಸಲುಗಳು**

ನಿವೇಶನದ ಜಾಗವನ್ನು ತನ್ನ ಸುಪರ್ದಿಗೆ ತೆಗೆದುಕೊಂಡ ರಾಮಚಂದ್ರಪ್ಪಗೌಡ ಜಮೀನಿನ ಸುತ್ತ ಕಲ್ಲುಕಂಬ ನೆಡಿಸಿ ಮುಳ್ಳುಬೇಲಿ ಹಾಕಿಸಿದ. ಈ ಅಕ್ರಮವನ್ನು ಪ್ರತಿಭಟಿಸಿದ ದಲಿತರು, ಕಂಬ ಮತ್ತು ಮುಳ್ಳು ಬೇಲಿಯನ್ನು ಕಿತ್ತು ಆರು ಗುಡಿಸಲನ್ನು ಕಟ್ಟಿದರು. ಕೂಡಲೆ ರಾಮಚಂದ್ರಪ್ಪಗೌಡನಿಗೆ ಶಾಮೀಲಾಗಿದ್ದ ಮೂಡಿಗೆರೆ ಸರ್ಕಲ್ ಇನ್ಸ್‌ಪೆಕ್ಟರ್ ಶರೀಫ್ ಈ ದಲಿತರ ಮೇಲೆ ಹಲ್ಲೆ ಕೇಸುಮಾಡಿ ಇಪ್ಪತ್ತು ಜನರನ್ನು ಬಂಧಿಸಿ ತೆಗೆದುಕೊಂಡು ಹೋಗಿ ಹೊಡೆದು, ಆರು ಜನರ ಮೇಲೆ ಟ್ರೆಸ್ ಪಾಸ್ ಕೇಸ್ ರಿಜಿಸ್ಟರ್ ಮಾಡಿಕೊಂಡು ಅವರನ್ನೆಲ್ಲ ಹೀನಾಮಾನ ಬೈದು ಕಳಿಸಿದರು.

**ರಕ್ತದ ಓಕುಳಿ**

ದಿ.೧೪.೪.೮೭ರಂದು ಅಂಬೇಡ್ಕರ್ ಜಯಂತಿಯ ಪ್ರಯುಕ್ತ ಹುಲ್ಲೇಮನೆ ಹಾಗು ಚಂಡಗೋಡಿನ ದಲಿತ ಸಂಘರ್ಷ ಸಮಿತಿ ಹುಡುಗರು ಹುಲ್ಲೇಮನೆ ಗ್ರಾಮದಲ್ಲಿ ರಾತ್ರಿ ೯ ಗಂಟೆಯ ಸಮಯದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮವೊಂದನ್ನು ನಡೆಸುತ್ತಿದ್ದರು. ಈ ಹುಲ್ಲೇಮನೆ ಎಂದರೆ ಪ್ರತಿಯೊಂದು ಮನೆಯೂ ನಾಲ್ಕು ಜನ ಕುಳಿತುಕೊಳ್ಳುವಷ್ಟು ಸ್ಥಳದ ಹುಲ್ಲು ಜೋಪಡಿಗಳು. ಇಲ್ಲಿನ ಸವರ್ಣೀಯ ಹಾಗೂ ದಲಿತ ಕುಟುಂಬಗಳು ಒಂದೇ ಥರವಿದ್ದರೂ ತಲೆತಲಾಂತರದಿಂದ ಹರಿಜನರು ಸವರ್ಣಿಯರ ಸೇವೆ ಮಾಡಿಕೊಂಡು ಬಂದಿದ್ದಾರೆ. ಪುಗಸಟ್ಟೆ ವಾಲಗ, ತಮಟೆ, ಇತ್ಯಾದಿಯಲ್ಲದೆ ಅವರ ಸತ್ತ ದನ ಎಮ್ಮೆ ಸಾಗಿಸುವ ಕೆಲಸವೂ ಬಿಟ್ಟಿಯೇ. ಇಂತಹ ಸ್ಥಿತಿಯಲ್ಲಿ ಅಂಬೇಡ್ಕರ್ ಜಯಂತಿಯಂದು ಆ ಊರಿನ ಮಾವಿನ ಮರದ ಕೆಳಗೆ ದ.ಸಂ.ಸ. ಹುಡುಗರು ಹೋರಾಟದ ಹಾಡುಗಳನ್ನು ಹಾಡಲಾರಂಭಿಸಿದ ಕೂಡಲೇ, ಅಲ್ಲಿನ ಗೌಡ ಕೋಮಿನವರ ಕೋಪ ನೆತ್ತಿಗೇರಿದೆ. ಕೂಡಲೆ "ಎಲಾ ಹೊಲೆಯ ನನ್ನ ಮಕ್ಕಳಾ ಯಾರ ಅಪ್ಪಣೆ ಪಡೆದು ಇಲ್ಲಿ ಮೀಟಿಂಗ್ ಮಾಡ್ತೀರಿ?" ಎಂದು ಬೈದು "ಅಹಾ ಬೋಳಿ ಮಕ್ಳು ಹಾಕಿರುವ ಬಟ್ಟೆನೋಡು!" ಎಂದು ಅಣಕಿಸಿದ್ದೂ ಅಲ್ಲದೆ ಅಸಹ್ಯ ಭಾಷೆಯನ್ನು ಬಳಸಿ ದ.ಸಂ.ಸ. ಹುಡುಗರ ಮೇಲೆ ಸುಮಾರು ಇಪ್ಪತ್ತು ಜನ ಹೊಡೆದಾಟಕ್ಕಿಳಿದಿದ್ದಾರೆ. ಹೊಡೆಯಲು ಮೊದಲೇ ಸಿದ್ಧರಾಗಿ ಬಂದಿದ್ದ ಗೌಡರಿಗೆ ಸಿಡಿಯಷ್ಟು ಹುಡುಗರು ಯಾವ ಮೂಲೆಗೇ! ಮೊಣ್ಣೆಯಿಂದ ಎಲ್ಲಹುಡುಗರಿಗೂ ಹೊಡೆದು ಎಳೆದಾಡಿ ಮಾವಿನಮರದ ಕೆಳಗೆ ದಲಿತರ ರಕ್ತವನ್ನು ಓಕುಳಿಯಾಡಿದ್ದಾರೆ. ಏಟು ತಡೆಯಲಾರದ ಹಾಲಪ್ಪ ಮತ್ತು ಗೋಪಾಲ, ಅಲ್ಲಿಂದ ತಪ್ಪಿಸಿಕೊಂಡು ಪೋಲೀಸರಿಗೆ ದೂರುಕೊಡಲು ಓಡಿದರು. ಆ ಕತ್ತಲೆಯಲ್ಲಿ ದಿಕ್ಕು ದೆಸೆಯಿಲ್ಲದೆ ಓಡಿದ ಅವರ ಪ್ರಾಣಭಯ ಅಲ್ಲಿದ್ದ ಸವರ್ಣಿಯರಿಗೆ ನಗುತರಿಸಿತ್ತು. ಇನ್ನುಳಿದ ಹುಡುಗರನ್ನು ಚೆನ್ನಾಗಿ ಮೈ ಕೈ ನುಗ್ಗಾಗುವಂತೆ ಹೊಡೆದು ಅವರ ಬಟ್ಟೆ ಬಿಚ್ಚಿ ಶಿಕ್ಷೆ ಕೊಟ್ಟು ಸಂಪೂರ್ಣ ತೃಪ್ತಿಯಿಂದ ನಕ್ಕಿದ್ದಾರೆ. ಇಷ್ಟೊಂದು ಹಗೆಗೆ ಕಾರಣ ಇನ್ನು ಮುಂದೆ ತಮ್ಮ ದನ ತಾವೇ ಹೊರಬೇಕು, ತಮ್ಮ ತಮಟೆ ವಾಲಗ ತಾವೇ ಬಾರಿಸಬೇಕು. ತಾವು ಸತ್ತಾಗ ತಮ್ಮ ಗುಂಡಿಯನ್ನು ತಾವೆ ತೋಡಿಕೊಳ್ಳಬೇಕಾಗುತ್ತದಲ್ಲ! ಎಂಬ ಕಿಚ್ಚಿನಿಂದ ಆ ಹುಡುಗರ ಬಳಿಯಿದ್ದ ಬಟ್ಟೆ, ತಾಳ, ಬ್ಯಾಟರಿ, ಇತ್ಯಾದಿಯನ್ನು ಕಿತ್ತುಕೊಂಡು ಕಳಿಸಿದ್ದಾರೆ.

**ಷರೀಫನು ಬುಟ್ಟಿಗೆ ....**

ಇವರಮೇಲೆ ನಡೆದ ಹಲ್ಲೆಯ ದೂರನ್ನು ಪಡೆದ ಆಲ್ದೂರು ಪೋಲೀಸ್ ಠಾಣೆಯ

(ಮುಂದಿನ ಪುಟಕ್ಕೆ)

[ಮೂರನೇ ಪುಟದಿಂದ]

ಸಬ್‌ಇನ್ಸ್‌ಪೆಕ್ಟರ್ ಹುಲ್ಲೇಮನೆಗೆ ಹೋಗಿ ಅಲ್ಲಿ ಸ್ಥಳ ಪರಿಶೀಲನೆ ಮಾಡಿದರು. ಮಾವಿನ ಮರದ ಕೆಳಗೆ ದ.ಸಂ.ಸ ಹುಡುಗರನ್ನು ಹೊಡೆಯಲು ಬಳಸಿದ್ದ ದೊಣ್ಣೆ ಕಲ್ಲು ಮತ್ತು ಎಳೆದಾಡಿದ ಗುರುತುಗಳು ಒಂದು ರಣರಂಗದಂತೆ ಇತ್ತು. ಅದನ್ನೆಲ್ಲ ನೋಡಿದ ಸಬ್ ಇನ್ಸ್‌ಪೆಕ್ಟರ್ ಸೀಜ್ ಮಾಡಿಕೊಂಡು ಅವರ ಮೇಲೆ ಕೇಸ್ ಬುಕ್ ಮಾಡಿದರು. ಅಷ್ಟರಲ್ಲಿ ಗೌಡರುಗಳು ಹೋಗಿ ಇನ್ಸ್‌ಪೆಕ್ಟರನ ಬಾಯಿಗೆ ಹಾಕಿದರು. ಅವನ ಮುಖಾಂತರ ಶರೀಫ್‌ನನ್ನೂ ಬುಟ್ಟಿಗೆ ಹಾಕಿಕೊಂಡರು.

ದಿ. ೨೦.೪.೮೨ರಂದು ಅವರು ದ.ಸಂ.ಸ. ಹುಡುಗರನ್ನು ಕರೆಸಿ ಚೆನ್ನಾಗಿ ಬೈದು ರಾಜೀ ಮಾಡಲು ಯತ್ನಿಸಿದ್ದಾರೆ. ಹುಡುಗರು ಪ್ರತಿಭಟಿಸಿದ್ದಕ್ಕೆ ಇಡೀ ಘಟನೆಯನ್ನು ತಿರುಗುಮುರುಗು ಮಾಡಿಬಿಟ್ಟ. ಅದೇನೆಂದರೆ ಹರಿಜನರು ತಾವು ತಾವೇ ಹೊಡೆದಾಡಿ ಅವರನ್ನು ಬಿಡಿಸಲು ಹೋದ ಗೌಡರಿಗೆ ಹೊಡೆದದ್ದೂ ಅಲ್ಲದೆ, ಸುಳ್ಳು ಕಂಪ್ಲೇಂಟ್ ಕೊಟ್ಟಿದ್ದಾರೆಂದು' ಬಾಯಿಗೆ ಬಂದಂತೆ ಬಯ್ಯಲಾರಂಭಿಸಿದ, ಅಲ್ಲದೆ "ಇನ್ನು ಮುಂದೆ ಸುಳ್ಳು ಕಂಪ್ಲೇಂಟ್ ಕೊಟ್ಟರೆ ನಿಮ್ಮ ದಲಿತ ಸಂಘದವರು ಗಲಾಟೆ ಮಾಡಿದರೆ ಕೈಕಾಲು ಮುರಿಯುತ್ತೇನೆ" ಎಂದು ಗದರಿಸಿ ಕಳುಹಿಸಿದ.

### ಇನ್ಸ್‌ಪೆಕ್ಟರ ಇಬ್ಬಂದಿತನ

ದಿ. ೩೦. ೪. ೮೨ರಂದು ಮೂಡಿಗೆರೆಯಲ್ಲಿ ಅಂಬೇಡ್ಕರ್ ಜಯಂತಿ ನಡೆಯುವ ಸಂದರ್ಭದಲ್ಲಿ ವೆಂಕಟಪ್ಪ ಬಂದು ಭಯದಿಂದ ತನ್ನ ಸ್ಥಿತಿಯನ್ನು ನನಗೆ ವಿವರಿಸಿದ. ಮತ್ತು ಆಲ್ದೂರ್ ಇನ್ಸ್‌ಪೆಕ್ಟರ್ ಹಾಗು ಮೂಡಿಗೆರೆಯ ಸರ್ಕಲ್ ಇನ್ಸ್‌ಪೆಕ್ಟರ್ ಶಾಮೀಲಾಗಿ ಹುಲ್ಲೇಮನೆಯಲ್ಲಿ ನಡೆದ ಘಟನೆಯನ್ನು ಮೂಲೆಗಾಕಿದರು. ನಾನು ಹಾಗು ದ.ಸಂ.ಸ. ಮಿತ್ರರು ಕೆಲವರು ಹೋಗಿ ಮೂಡಿಗೆರೆ ಸರ್ಕಲ್ ಇನ್ಸ್‌ಪೆಕ್ಟರ್ ಶರೀಫರನ್ನು ಮೇಲಿನ ಎರಡು ಘಟನೆಯ ವಿಷಯವಾಗಿ ಕೇಳಿದೆ, "ಸಾರ್ ಹುಲ್ಲೇಮನೆ ಗಲಾಟೆಯಲ್ಲಿ ಹಲ್ಲೆ ನಡೆಸಿದವರ ಬಗ್ಗೆ ನೀವೇನೂ ಕ್ರಮ ತೆಗೊಂಡಿಲ್ಲ" ಎಂದೆ. ಅದಕ್ಕೆ ಕೂಡಲೆ ಇನ್ಸ್‌ಪೆಕ್ಟರು" ನೀನ್ಯಾರೊ ಅದನ್ನ ಕೇಳೊಕ್ಕೆ" ಎಂದರು. ನಾನು ಶಾಂತವಾಗಿಯೇ "ಸಾರ್ ನಾನು ಯಾರಾದ್ರು ಆಗಿರಬಹುದು ರಾಮಚಂದ್ರಪ್ಪ ದಲಿತರ ನಿವೇಶನ ವಶಪಡಿಸಿಕೊಂಡ ಬಗ್ಗೆ ನೀವು ದಲಿತರನ್ನೇ ಹೊಡೆದಿದ್ದೀರಿ. ಅಲ್ದೆ ಹುಲ್ಲೇ ಮನೆಗಲಾಟೆಯಲ್ಲಿ

> **"ಹೊಲೆಯ ಎಂಬ ಶಬ್ದ ಬಳಸದೆ ಇನ್ಸ್‌ಪೆಕ್ಟರ್ ಯಾವ ಬೈಗಳನ್ನೂ ಬಯ್ಯುತ್ತಿರಲಿಲ್ಲ. ಆದ್ದರಿಂದ ನನಗೆ ಏಟಿಗಿಂತಲೂ ಹೆಚ್ಚು ನೋವಾಯಿತು 'ಹೊಲೆಯ' ಎಂದವನಿಗೆ ಶಿಕ್ಷಿಸಬೇಕಾದ ಈ ಅಧಿಕಾರಿಯೇ ಹೊಲೆಯ ಎಂದು ಕೂಗುತ್ತಿರುವಾಗ ನಾವಿನ್ನಾರಿಗೆ ಮರೆಹೋಗುವುದು"**

ಹರಿಜನರಿಗೆ ಹೊಡೆದವರ ಮೇಲೆ ಕೇಸ್‌ಬುಕ್ ಮಾಡಿ ಈಗ ಬೇರೆ ಮಾತಾಡ್ತಿರಲ್ಲ" ಎಂದೆ. ಇನ್ಸ್‌ಪೆಕ್ಟರರ ಇಬ್ಬಂದಿತನ ಅವರಿಗೆ ಗೋಚರವಾಗಿ ಆತ ಕೂಡಲೇ ರೇಗಿಬಿಟ್ಟ: "ಲೇ ಸುಭಾಷ್ ಭರಣಿ ಕಾಲ್ದಲ್ಲಿ ಆಡಿದಂತೆ ಆಡಬೇಡ ಕಾಲು ಮುರಿದು ಬಿಡ್ತಿನಿ" ಎಂದ. ಅವರೆಷ್ಟು ರೇಗಿದರೂ ನಾನು ತಾಳ್ಮೆಯಿಂದ ಕೇಳಿದೆ. "ನಿವೇಶನದ ವಿಷಯದಲ್ಲಿ ಆದ ಅನ್ಯಾಯ ಹುಲ್ಲೇಮನೆಯಲ್ಲಾದ ಹಲ್ಲೆ ಬಗ್ಗೆ ನಾವು ಇನ್ಯಾರನ್ನು ಕೇಳಬೇಕು" ಎಂದೆ. ಆತ ಕೂಡಲೆ "Get out from here" ಎಂದದ್ದೂ ಅಲ್ಲದೆ "ಹೊಲೆಯ ಸೂಳೆ ಮಕ್ಕಳು ಹೆಚ್ಚಿಕೊಂಡಿದ್ದೀರಿ. ಲೇ ಹಾಕೊ ಇವನ್ನ ವಳಗೆ" ಎಂದು ಕೂಗಾಡಿದ. ನಾನು ಅವನಿಗೆ ಅವಮಾನವಾಗುವಷ್ಟು ತಾಳ್ಮೆಯಿಂದ "ಸಾರ್ ಜಾತಿ ಹಿಡಿದು ಮಾತಾಡಬ್ಯಾಡಿ ನೀವೇ ಕೇಸ್ ಬುಕ್ ಮಾಡಿ ಈಗ ನಾವೆ ಹೊಡೆದಾಡಿದೊ ಬಿಡಿಸಲು ಬಂದವರಿಗೆ ಹೊಡೆದು ಸುಳ್ಳು ಕಂಪ್ಲೇಂಟ್ ಕೊಟ್ಟಿದ್ದಿರಿ ಎಂದಿದ್ದೀರಲ್ಲ · ಈ ಮೊದಲು ಅವರ ಮೇಲೆ ಕೇಸ್ ಬುಕ್ ಮಾಡಿದ್ದೀರಲ್ಲ" ಎಂದೆ. ಕೂಡಲೆ ಆತ 'ಸರಕಾರಿ ಕೆಲಸಕ್ಕೆ ಅಡ್ಡಿಯುಂಟು ಮಾಡಿ ಗಲಾಟೆ ಮಾಡ್ತಿಯ" ಎಂದು ತನ್ನ ಮನಸ್ಥಿತಿ ಕಳೆದುಕೊಂಡವನಂತೆ ಕೆಟ್ಟ ಮಾತುಗಳಿಂದ ಬೈಯ್ಯುತ್ತ ನನ್ನ ಮುಖದ ಮೇಲೆ ರಪ್ಪೆಂದು ಹೊಡೆದ. ನನಗೆ ತಲೆ ತಿರುಗಿದಂತಾಗಿ "ಸಾರ್" ಹೊಡಿಬೇಡಿ ನಾವು ನ್ಯಾಯ ಕೇಳೊಕ್ಕೆ ಬಂದಿದ್ದೇವೆ" ಮತ್ತೊಮ್ಮೆ ಆತ ತಲೆಯ ಮೇಲೆ ಹೊಡೆದ. ಅಷ್ಟರಲ್ಲಿ ಹಿಂದಿನಿಂದ ಪೋಲಿಸ್ ಹನುಮಂತಪ್ಪ ಬೂಟುಕಾಲಿನಿಂದ ವದ್ದ. ಇನ್ಸ್‌ಪೆಕ್ಟರ್ ಹೊಡೆದ ಏಟಿಗೆ ನನ್ನ ಮೂಗಿನಿಂದ ರಕ್ತ ಬರಲಾರಂಭಿಸಿತು. ಬಟ್ಟೆ ಎಲ್ಲ ವದ್ದೆಯಾಯ್ತು. ಹಿಂದಿನಿಂದ ಬೂಟು ಕಾಲಿನಿಂದ ವದ್ದ ಏಟಿಗೆ ನಾನು ಕೆಳಕ್ಕೆ ಬಿದ್ದೆ. ಕೂಡಲೇ ಪೋಲೀಸ್ ಮತ್ತೆ ವದ್ದು ನನ್ನ ಬಟ್ಟೆಯನ್ನೆಲ್ಲ ಹರಿದರು. ಇಷ್ಟಾದರೂ ಇನ್ಸ್‌ಪೆಕ್ಟರ್ ಬೈಯ್ಯುವುದು ಹೊಡೆಯುವುದು ನಿಲ್ಲಿಸಲಿಲ್ಲ. ನನಗೆ ಪ್ರಜ್ಞೆ ಹೋಗುವಂತ ಸಮಯದಲ್ಲೂ "ಸಾರ್ ಹೊಡಿಬೇಡಿ ನೀವು ತಪ್ಪು ಮಾಡ್ತಿದ್ದೀರಿ" ಎಂದೆ. ಇನ್ಸ್‌ಪೆಕ್ಟರ್ ಹೊಲೆಯ ಎಂಬ ಶಬ್ದ ಉಪಯೋಗಿಸದೆ ಯಾವ ಬೈಗುಳವನ್ನೂ ಬೈಯ್ಯುತ್ತಿರಲಿಲ್ಲ. ಆದ್ದರಿಂದ ನನಗೆ ಏಟಿಗಿಂತಲೂ ಹೆಚ್ಚು ನೋವಾಯಿತು. ಹೊಲೆಯಎಂದವನಿಗೆ ಶಿಕ್ಷಿಸಬೇಕಾದ ಈ ಅಧಿಕಾರಿಯೇ ಹೊಲೆಯಾ ಎಂದು ಕೂಗುತ್ತಿರುವಾಗ ನಾವಿನ್ನಾರಿಗೆ ಮೊರೆ ಹೋಗುವುದು? ಯು. ಟಿ. ಕೇಸಿಗೆ ಒಳಗಾಗುವ ಮಾತನ್ನು ಪದೇ ಪದೇ ಬಳಸುವ ಇವನನ್ನು ಶಿಕ್ಷಿಸುವುದು ಹೇಗೆ ಮತ್ತು ಯಾರು? ಅವರ ರೋಷವೆಲ್ಲ ಇಳಿದಮೇಲೆ ನನ್ನ ಬಟ್ಟೆ ಬಿಚ್ಚಿಸಿ ಲಾಕಪ್ಪಿಗಾಕಿದರು. ಮೊದಲೇ ಊಟವಿಲ್ಲದೆ ಸೊರಗಿದ್ದ ನಾನು ಅಲ್ಲೆ ಕುಳಿತೆ. ಒಳಗೆ ಚರಂಡಿಗಿಂತಲೂ ವಾಸನೆ ತುಂಬಿತ್ತು. ನನಗೆ ಹೊಡೆತ ಬಿದ್ದ ಜಾಗದಲ್ಲೆಲ್ಲ ಹುಣ್ಣಿನಂತೆ ನೋಯುತ್ತಿತ್ತು. ಜೊತೆಗೆ ಒಬ್ಬ ರಕ್ಷಣಾಧಿಕಾರಿ ಹೊಲೆಯ ಎಂದದ್ದು ಇನ್ನೂ ನೋಯುತ್ತಿತ್ತು.

### ರೆಡಿಯಾದ ಬಂದೂಕಗಳು

ಇತ್ತ ನಮ್ಮ ಹುಡುಗರ ಮುಖಾಂತರ ಸುದ್ದಿ ತಿಳಿದು ಚಿಕ್ಕಮಗಳೂರಿಂದ ನೂರಾರು ಜನ ಸಂಘರ್ಷಸಮಿತಿಯವರು ಬಂದು ಪೋಲೀಸ್ ಠಾಣೆ ಎದುರು ಪ್ರತಿಭಟಿಸಿದರು. ಆದರೂ ಬಿಡುಗಡೆ ಮಾಡಲಿಲ್ಲ. ಮೂಡಿಗೆರೆಯ ತಾಲ್ಲೂಕಿನಲ್ಲೇ ರಾಕ್ಷಸನೆಂದು ಹೆಸರಾದ ಷರೀಫನ ಮೇಲೆ ಸೇಡುತೀರಿಸಿಕೊಳ್ಳಲು ಸಾವಿರಾರು ಜನ ಠಾಣೆಯ ಮುಂದೆ ಜಮಾಯಿಸಿ ಘೋಷಣೆ ಕೂಗಲಾರಂಭಿಸಿದರು.

ಪೋಲೀಸರು ಈ ಜನರ ಪ್ರತಿಭಟನೆ ನೋಡಿ ಚಿಕ್ಕಮಗಳೂರಿಂದ ಎಸ್. ಪಿ. ಎಸ್. ಎಸ್. ಮುಸಲಿ ಡಿ.ಸಿ. ಪಿ.ಬಿ.ಮಹಿಷಿ ಮತ್ತು ಎರಡು ವ್ಯಾನ್ ರಿಜರ್ವ್ ಪೋಲೀಸ್ ಕರೆಸಿಕೊಂಡರು. ಆಗ ನನ್ನ ಬಿಡುಗಡೆಗೆ ಜನ ಡಿ.ಸಿ.ಮಹಿಷಿಯನ್ನು ಕೇಳಿಕೊಂಡರು. ಅದಕ್ಕವರು ನಿರಾಕರಿಸಿದರು. ಜನ ತುಂಬ ಉದ್ರೇಕ ಮುಟ್ಟಿದಾಗ ಲಾಟಿಚಾರ್ಜಿನಿಂದ ಪ್ರಯೋಜನವಿಲ್ಲವೆಂದು ಗೋಲಿಬಾರಿಗಾಗಿ ಬಂದೂಕುಗಳಿಗೆ ಲೋಡ್ ಮಾಡಿಕೊಳ್ಳಲಾರಂಭಿಸಿದರು. ನನಗೆ ತುಂಬ ಭಯವಾಗಿ ಈಗ ಅನ್ಯಾಯವಾಗಿ ಯಾರನ್ನಾದರೂ ನಿರ್ದಾಕ್ಷಿಣ್ಯವಾಗಿ ಕೊಲ್ಲುತ್ತಾರಲ್ಲ!

ಮೂಡಿಗೆರೆಯ ಸವರ್ಣೀಯರೆಲ್ಲರು ಸಾವಿರಾರು ಸಂಖ್ಯೆಯಲ್ಲಿ ಜಮಾಯಿಸಿ ಠಾಣೆಯ ಮೇಲೆ ಕಲ್ಲು ತೂರಲಾರಂಭಿಸಿದ ಮೇಲೆ ಪೋಲೀಸರು ನಿರ್ವಾಹವಿಲ್ಲದೆ ರಾತ್ರಿ ೨-೩೦ಕ್ಕೆ ನನ್ನನ್ನು ಬಿಡುಗಡೆಮಾಡಿ, ಎಸ್.ಪಿ. ಡಿ.ಸಿ.

ಜೊತೆಯಲ್ಲಿಯೇ ಚಿಕ್ಕಮಗಳೂರಿಗೆ ತಂದರು. ಮತ್ತು ನನ್ನನ್ನು ದಿ. ೧-೫-೮೨ರಂದು ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಿದರು. ನಾನು ಅಲ್ಲಿ ನಡೆದ ಘಟನೆಯನ್ನು ವಿವರಿಸಿ ನನ್ನ ಅರಿದ ಬಟ್ಟೆ ಹಾಗು ಅವುಗಳಿಗಾಗಿದ್ದ ರಕ್ತದ ಕಲೆಯನ್ನು ತೋರಿಸಿದೆ. ನನ್ನ ಕನಿಕರದ ಕತೆ ಕೇಳಿ ಅವರ ಮನಸ್ಸು ಕರಗುವುದೆಂದಿದ್ದೆ. ಆದರೆ ಯಾವ ಮಾನವೀಯ ಮರುಕದ ಗೆರೆಯೂ ಅವರ ಮುಖದ ಮೇಲೆ ಕಾಣಿಸಲಿಲ್ಲ.

**ಚಪ್ಪಲಿ ಹಾರ**

ಸರ್ಕಾರಿ ಕೆಲಸಕ್ಕೆ ಅಡ್ಡಿ, ಆತಂಕ ಉಂಟುಮಾಡಿದ್ದೂ ಅಲ್ಲದೆ ಪೋಲೀಸರಿಗೂ ಹೊಡೆದ ಎಂಬ ಕೇಸನ್ನು ನನ್ನ ಮೇಲೆ ಹಾಕಿದರು. ನಾನು ಜಾಮೀನಿನ ಮೇಲೆ ಬಿಡುಗಡೆಯಾಗಿ ಡಾಕ್ಟರ್ ಸರ್ಟಿಫಿಕೇಟಿನೊಡನೆ ಎಸ್.ಪಿ.ಗೆ ಡಿ.ಐ.ಜಿ.ಗೆ ಐ.ಜಿ.ಪಿ.ಗೆ ಮುಖ್ಯಮಂತ್ರಿಗೆ ಹಾಗು ಲೋಕಲ್ ಎಂ.ಎಲ್.ಎ.ಗೆ ಕಂಪ್ಲೇಂಟ್ ಕೊಟ್ಟೆ.

ಈ ನಡುವೆ ನಾವು ನ್ಯಾಯಕ್ಕಾಗಿ ಮತ್ತೆ ಎಸ್.ಪಿ.ಯವರನ್ನು ಕೇಳಿದೆವು. ಎಲ್ಲವನ್ನೂ ವಿಚಾರಿಸಿ ವಾರದೊಳಗೆ ಕ್ರಮ ತೆಗೆದುಕೊಳ್ಳುವೆ ಎಂದು ಹೇಳಿದರು. ಒಂದು ವಾರದ ನಂತರವೂ ಎಸ್.ಪಿ.ಯಿಂದ ಯಾವ ಕ್ರಮವೂ ಜರುಗಲಿಲ್ಲ. ಅದಕ್ಕಾಗಿ ನಾವು ದಿ ೭-೫-೮೨ರಂದು ಮೂಡಿಗೆರೆಯಲ್ಲಿ ದ.ಸಂ.ಸಮಿತಿ ವತಿಯಿಂದ ಪ್ರತಿಭಟನಾ ಮೆರವಣಿಗೆ ಏರ್ಪಡಿಸಿ ಸರ್ಕಲ್ ಇನ್ಸ್‌ಪೆಕ್ಟರ್ ಪ್ರತಿಕೃತಿ ಮಾಡಿ ಚಪ್ಪಲಿ ಹಾರ ಹಾಕಿ ಊರಿನ ಬೀದಿಯಲ್ಲಿ ಮೆರವಣಿಗೆ ಮಾಡಿದೆವು. ಕಮ್ಯೂನಿಸ್ಟರು ಬಿಜೆಪಿಯವರು ಸಹಕರಿಸಿದರು. ಮೆರವಣಿಗೆಯ ನಂತರ ಸರ್ಕಲ್ ಇನ್ಸ್‌ಪೆಕ್ಟರನ ಪ್ರತಿಕೃತಿಯನ್ನು ದಹನಮಾಡಿ ಸಭೆ ನಡೆಸಿದೆವು. ಶ್ರೀ ಬಿ. ಕೃಷ್ಣಪ್ಪ ಅಧ್ಯಕ್ಷತೆ ವಹಿಸಿದ್ದರು. ಹಾಸನದ ಚಂದ್ರಪ್ರಸಾದ ತ್ಯಾಗಿ ಕೋಲಾರದ ಎನ್ ವೆಂಕಟೇಶ್ ಚಿಕ್ಕಮಗಳೂರಿನ ಹೆಚ್. ಸಿ ರಾಜಣ್ಣ ಇವರ ಸಮ್ಮುಖದಲ್ಲಿ ನಡೆದ ಸಭೆಯಲ್ಲಿ ನಾನು ನಡೆದ ಎಲ್ಲಾ ಘಟನೆಯನ್ನು ವಿವರಿಸಿದೆ.

ಒಂದು ವಾರದ ನಂತರ ನಾನು ಬಿ. ಕೃಷ್ಣಪ್ಪ ಎಸ್. ಪಿ. ಮುಸಲಿಯವರನ್ನು ಕಂಡಾಗ "ನಾನು ಖಂಡಿತ ಕ್ರಮ ತೆಗೆದುಕೊಳ್ಳುವೆ ನನ್ನ ಕ್ರಮ ತೃಪ್ತಿಯಾಗಲಿಲ್ಲ ಎಂದರೆ ನೀವು ನಿಮ್ಮ ಕೆಲಸ ಮಾಡಿ" ಎಂದರು, ಆದರೂ ಯಾವ ಕ್ರಮವೂ ಜರುಗಲಿಲ್ಲ.

ರಾಜ್ಯದಾದ್ಯಂತ ೧೫.೫.೮೨ರಂದು ಆಯಾ ಜಿಲ್ಲಾ ಎಸ್.ಪಿ. ಆಫೀಸಿನ ಮುಂದೆ ಧರಣಿ ಕೂತೆವು. ಮೂರುಗಂಟೆಗೆ ಎಸ್.ಪಿ. ಬಂದಾಗ ಮನವಿ ಪತ್ರ ಕೊಡಲಾಯಿತು. ಎಸ್. ಪಿ. "ನೀವೀಗ ಗಲಾಟೆ ಮಾಡಬೇಡಿ ನಾನು ಈ ಹಿಂದೆ ಹೇಳಿದಂತೆ ಕ್ರಮ ತೆಗೆದುಕೊಳ್ಳುವೆ" ಎಂದು ಅದೇ ಹಳೆಯರಾಗ ಎಳೆದು "ಇನ್ನು ಕಾಲು ಗಂಟೆಯಲ್ಲಿ ಇಲ್ಲಿಂದ ಹೋಗಿ. ಹೋಗದಿದ್ದರೆ ಅರೆಸ್ಟು ಮಾಡುತ್ತೇನೆ" ಎಂದು ಬೆದರಿಕೆ ಹಾಕಿದರು.

ನಾನು ತಾಳ್ಮೆಯಿಂದ ಕೇಳಿದೆ, "ನ್ಯಾಯ ಕೇಳಲು ಬಂದ ನಮ್ಮನ್ನು ಅರೆಸ್ಟು ಮಾಡುತ್ತೀರಿ; ನಮ್ಮ ಮೇಲೆ ಹಲ್ಲೆ ಮಾಡಿದವರನ್ನು ಪೋಷಿಸುತ್ತೀರಿ ನಾವಿನ್ಯಾರ ಬಳಿ ಹೋಗಬೇಕು" ಎಂದೆ. ಕುಪಿತಗೊಂಡ ಎಸ್.ಪಿ. ನಾವು ೪೭ ಜನರನ್ನು ಅರೆಸ್ಟು ಮಾಡಿಸಿದ. ಪೋಲೀಸರು ನಮ್ಮಲ್ಲಿ ಕೆಲವರಿಗೆ ಹೊಡೆದು ವ್ಯಾನಿಗೆ ತುಂಬಿದರು. ಪೋಲೀಸರೆಂದರೆ ಹೊಡೆಯುವುದೇ ಅವರ ಕೆಲಸವೆಂದು ಭಾವಿಸಿದಂತಿತ್ತು.

**"ನಮ್ಮನ್ನು ಅಮಾನುಷವಾಗಿ ಹೊಡೆದ ಷರೀಫ್ ಹಾಗೂ ಅವನಿಗೆ ಸಹಾಯಕರಾದ ಎಸ್ ಪಿ ಮುಸಲಿ ಹಾಗೂ ಅವರ ಇಲಾಖೆ ಬಹಳ ನೆಮ್ಮದಿಯಿಂದಿದೆ! ನಾವು ಮಾತ್ರ ಕೋರ್ಟಿಗೆ ಅಲೆಯುತ್ತಿದ್ದೇವೆ!!"**

ಅರೆಸ್ಟು ಮಾಡಿದ ನಂತರ ನಮ್ಮನ್ನೆಲ್ಲ ಆ ಕ್ಷಣವೇ ಕಡೂರಿಗೆ ತಂದು ಕೋರ್ಟಿಗೆ ಹಾಜರು ಪಡಿಸಿದರು. ಅಲ್ಲಿನ ಮ್ಯಾಜಿಸ್ಟ್ರೇಟರು ಸಾರ್ವಜನಿಕರ ಶಾಂತಿ ಭಂಗಕ್ಕಾಗಿ ನಿಮಗೆ ೨೦ರೂ ದಂಡ ವಿಧಿಸಿದೆ. ಕೊಡದಿದ್ದರೆ ಕೋರ್ಟಿನ ಅವಧಿ ಮುಗಿಯುವವರೆಗೆ ಅರೆಸ್ಟಿನಲ್ಲಿರಬೇಕು ನಂತರ ಬಿಡುಗಡೆಯಾಗಿ ಹೋಗಬಹುದೆಂದರು.

**ಜೇಬಲ್ಲಿ ಪೈಸ ಇಲ್ಲ**

ಇಲ್ಲಿ ನನಗೆ ಭಾರಿ ದುಃಖವಾಯಿತು. ಹಲ್ಲೇಮನೆಯಲ್ಲಿ ಹೊಡೆಸಿಕೊಂಡವರು ನಮ್ಮ ಹುಡುಗರು. ದಲಿತರ ನಿವೇಶನವನ್ನು ಲಪಟಾಯಿಸಿಕೊಂಡವನು ರಾಮಚಂದ್ರಪ್ಪ ಗೌಡ. ನನಗೆ ರಕ್ತ ಸೋರುವಂತೆ ಹೊಡೆದವನು 'ಮೂಡಿಗೆರೆಯ ಸರ್ಕಲ್' ಇನ್ಸ್‌ಪೆಕ್ಟರ್ ಷರೀಫ್'. ಇದನ್ನು ಕೇಳಲು ಹೋದ ನಮಗೆ ಕಡೂರು ಕೋರ್ಟಿನಲ್ಲಿ ೨೦ರೂ ಜುಲ್ಮಾನೆ !! ಜೋಬಿನಲ್ಲಿ ಮೂರು ಪೈಸೆ ಇಲ್ಲದ ನಾವು ಸುಮಾರು ೯೪೦ರೂಪಾಯಿಗಳನ್ನು ಎಲ್ಲಿಂದ ತಂದು ಕಟ್ಟುವುದು? ಅದಕ್ಕಾಗಿ ನಮ್ಮ ಸ್ಥಿತಿಯನ್ನು ಹೇಳಿಕೊಂಡು ಕೋರ್ಟಿನ ಅವಧಿ ಮುಗಿದ ನಂತರ ಬಿಡುಗಡೆ ಪಡೆದೆವು.

ನಾವು ಮತ್ತೆ ಪೋಲೀಸ್ ವ್ಯಾನು ಹತ್ತಲು ಹೋದೆವು. ಪೋಲೀಸರು ಕೂಡಲೆ ನಮ್ಮನ್ನು ತಡೆದು "ಲೇ ಬೋಳಿಮಕ್ಳ ನಡಕಂಡು ಹೋಗಿ ವ್ಯಾನು ನಿಮ್ಮಪ್ಪಂದಲ್ಲ" ಎಂದರು.

ಕೊನೆಗೆ ಬಸ್ಸ್ಟ್ಯಾಂಡಿನಲ್ಲಿ ಹೋರಾಟದ ಹಾಡುಗಳನ್ನು ಹಾಡಿದೆವು. ಸಾರ್ವಜನಿಕರು ನಾವು ಚಿಕ್ಕಮಗಳೂರು ತಲುಪುವಷ್ಟು ಹಣ ಕೊಟ್ಟರು. ಕೊನೆಗೆ ನಾವು ನಲವತ್ತೇಳು ಜನರು ಚಿಕ್ಕಮಗಳೂರಿಗೆ ಬಂದೆವು.

ನನ್ನನ್ನು ಅಮಾನುಷವಾಗಿ ಹೊಡೆದ ಷರೀಫ್ ಹಾಗು ಅವನಿಗೆ ಸಹಾಯಕರಾದ ಎಸ್.ಪಿ. ಮುಸಲಿ ಹಾಗು ಅವರ ಇಲಾಖೆ ಬಹಳ ನೆಮ್ಮದಿಯಿಂದಿದೆ. ನಾವು ಮಾತ್ರ ಕೋರ್ಟಿಗೆ ಅಲೆಯುತ್ತಿದ್ದೇವೆ. ....

## ಜೂನ್ 21 : ಬ್ಯಾಂಕ್ ದಲಿತ ನೌಕರರ ಧರಣಿ ಸತ್ಯಾಗ್ರಹ

ಆಲ್ ಇಂಡಿಯಾ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಹರಿಜನ–ಗಿರಿಜನ ನೌಕರರ ಸಂಘವು ಜೂನ್ 21ರಿಂದ ಬೆಂಗಳೂರಿನಲ್ಲಿರುವ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಕೇಂದ್ರ ಕಛೇರಿಯ ಎದುರು ಧರಣಿ ಮುಷ್ಕರ ನಡೆಸಲಿದೆ.

ಮೀಸಲಾತಿ ಸೀಟುಗಳಿದ್ದರೂ ಕೂಡಾ ಬ್ಯಾಂಕಿನ ಹರಿಜನ–ಗಿರಿಜನ ನೌಕರರಿಗೆ ಪ್ರಮೋಷನ್ ನೀಡದೆ, ಮೀಸಲಾತಿ ಸ್ಥಾನಗಳನ್ನು ಭರ್ತಿ ಮಾಡದೇ ಇರುವುದರ ವಿರುದ್ಧ ಮತ್ತು ಬ್ಯಾಂಕಿನ ಆಡಳಿತನಿರ್ದೇಶಕನ ಬೋಳೆ ಆಶ್ವಾಸನೆಯ ವಿರುದ್ಧ ಹರಿಜನ–ಗಿರಿಜನ ನೌಕರರ ಸಂಘ ಪ್ರತಿಭಟಿಸಿ ಧರಣಿ ಕೂರಲಿದೆ.

ಕೆನರಾ ಬ್ಯಾಂಕಿನ ಹರಿಜನ ಗಿರಿಜನ ನೌಕರರು ರಾಷ್ಟ್ರಮಟ್ಟದಲ್ಲಿ ತಮ್ಮದೇ ಆದ ಸಂಘವೊಂದನ್ನು ರಚಿಸಿಕೊಂಡಿರುವಂತೆಯೇ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ದಲಿತ ನೌಕರರು ತಮ್ಮ ಹಕ್ಕುಗಳಿಗಾಗಿ ಕಟ್ಟಿಕೊಳ್ಳಲು ಯತ್ನಿಸುತ್ತಿರುವ ಸಂಘಟನೆಯನ್ನು ಮೆಟ್ಟಲು ಸ್ಟೇಟ್ ಬ್ಯಾಂಕಿನ ಸವರ್ಣೀಯ ಅಧಿಕಾರಿಗಳು ಪ್ರಯತ್ನಿಸುತ್ತಿದ್ದಾರೆ. ಇದೇ ಕಾರಣಗಳಿಗಾಗಿ ಇತ್ತೀಚೆಗೆ ಹರಿಹರಕ್ಕೆ ಭೇಟಿ ಕೊಟ್ಟಿದ್ದ ಮ್ಯಾನೇಜಿಂಗ್ ಡೈರೆಕ್ಟರ್‌ರನ್ನು ನೌಕರರು ಘೇರಾವೋ ಮಾಡಿ ಕೇಳಿದಾಗ ಆತ ನೀಡಿದ ಆಶ್ವಾಸನೆ ಇನ್ನೂ ಈಡೇರಿಲ್ಲ. ಈ ನಡುವೆ ಸವರ್ಣೀಯರ ಹಿಡಿತದಲ್ಲಿರುವ ಕೆಲವು ಟ್ರೇಡ್ ಯೂನಿಯನ್‌ಗಳು ಕೂಡಾ ಬ್ಯಾಂಕ್ ದಲಿತ ನೌಕರರ ಸಂಘಕ್ಕೆ ನಾನಾ ನಮೂನೆಯಲ್ಲಿ ಮೋಸ ಮಾಡಲು ಹೊಂಚು ಹಾಕುತ್ತಿವೆ.

# ಬಿಹಾರದಲ್ಲಿ ಬೆಳೆಯುತ್ತಿರುವ ದಲಿತ ಸಂಘರ್ಷ

**ಏಕಲವ್ಯ**

೧೯೮೧ರಲ್ಲಿ ಬಿಹಾರದ ಭೋಜಪುರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೊಸ ಪೋಲೀಸ್ ಠಾಣೆಗಳನ್ನು ಕಳೆದೆರಡು ವರ್ಷಗಳಿಂದ ರಾಜ್ಯವಾಳುತ್ತಿರುವ ಜಗನ್ನಾಥಮಿಶ್ರಾ ಕಾಂಗ್ರೆಸ್ ಸರ್ಕಾರ ಸ್ಥಾಪಿಸಿದೆ. ಆದರೆ ಈ ಜಿಲ್ಲೆಯಲ್ಲಿ ನಾಗರೀಕರಿಗೆ ಹೆಚ್ಚಿನ ರಕ್ಷಣೆಯನ್ನು ನೀಡುವಲ್ಲಿ ಪೂರ್ಣ ವಿಫಲಗೊಂಡ ಈ ಠಾಣೆಗಳು ಜನಾಂದೋಲನಗಳನ್ನು ನಡೆಸ ಬಯಸುವರಿಗೆ, ತಮ್ಮ ಶೋಷಣೆಯನ್ನು ಪ್ರತಿಭಟಿಸುತ್ತ ಒಗ್ಗಟ್ಟಾಗುವವರಿಗೆ ಯಾತನಾ ಶಿಬಿರಗಳಾಗಿ ಪರಿಣಮಿಸಿವೆ. ಹೊಸದಾಗಿ ಠಾಣೆಗಳು ಸ್ಥಾಪಿತವಾದಾಗಿನಿಂದ ಜನತೆಯ ಮೇಲಿನ ಪೋಲೀಸ್ ದೌರ್ಜನ್ಯಗಳ ಸಂಖ್ಯೆಯೂ ಹೆಚ್ಚಾಗಿದೆ.

ಬಿಹಾರ ರಾಜ್ಯದ ಭೋಜಪುರ ಇಂಡಿಯಾದ ಸಾಮಂತವಾದೀ ಜಿಲ್ಲೆಯ ಮಾದರಿಯಾಗಿದೆ. ನೂರಾರು ಎಕರೆ ಭೂಮಿ ಹೊಂದಿರುವ ಭೂಮಾಲೀಕರು ಸರ್ವೆ ಸಾಮಾನ್ಯವಾಗಿ ಕಾಣಬರುತ್ತಾರೆ. ರಾಜ್ಯದ ಪ್ರತಿಷ್ಠಿತ ಜಾತಿಗಳಾದ ಯಾದವ ಹಾಗೂ ಕ್ಷತ್ರಿಯ ಜನಾಂಗಗಳು ಭೂ ಒಡೆತನವನ್ನು ತಮ್ಮ ವಶದಲ್ಲಿ ಇಟ್ಟುಕೊಂಡ ಪರಿಣಾಮವಾಗಿ ಕೃಷಿ ಕೂಲಿಕಾರರು ಅತಿ ಹೆಚ್ಚು ಶೋಷಣೆಗೀಡಾಗಿದ್ದಾರೆ.

ಕೃಷಿ ಕೂಲಿಕಾರರಲ್ಲಿ ಅತಿಹೆಚ್ಚಿನ ಸಂಖ್ಯೆಯ ಜನ ದಲಿತರಾಗಿರುವುದರಿಂದ ಶೋಷಣೆಗೆ ಆರ್ಥಿಕ ರೂಪದ ಸಂಗಡ ಸಾಮಾಜಿಕ ರೂಪವೂ ಸೇರಿಕೊಂಡು ಬಿಟ್ಟಿದೆ. ಸಾಮಂತವಾದೀ ಜಮೀನ್ದಾರರು ರಾಜಕೀಯ ಕ್ಷೇತ್ರದ ಪ್ರಭಾವಶಾಲಿಗಳನ್ನೂ ಸರ್ಕಾರಿ ಅಧಿಕಾರಿಗಳನ್ನೂ, ಪೋಲೀಸ್ ಅಧಿಕಾರಿಗಳನ್ನೂ ಮುಷ್ಠಿಯಲ್ಲಿ ಹಿಡಿದಿಟ್ಟುಕೊಂಡಿರುವುದರಿಂದ ಶೋಷಿತ ಜನತೆ ದೌರ್ಜನ್ಯದ ವಿರುದ್ಧ ದನಿ ಎತ್ತಿದರೆ ಭಾರೀ ಬೆಲೆ ತೆರಬೇಕಾಗುತ್ತದೆ. ಜಿಲ್ಲೆಯಲ್ಲಿ ಕಾಂಗ್ರೆಸ್ ನಂತರದ 'ಸ್ಥಾನ ಕ್ರಮವಾಗಿ ಸಿ.ಪಿ.ಐ. ಮತ್ತು ಲೋಕದಳಗಳಿಗಿವೆ. ಜಿಲ್ಲೆಯ ವಿಶಿಷ್ಟವಾತಾವರಣದಿಂದ ಈ ಪಕ್ಷಗಳ ಜನರೂ ಮೂಕರಾಗಿದ್ದು ಶೋಷಿತ ಜನತೆಯು ದೌರ್ಜನ್ಯಕ್ಕೀಡಾಗಲು ಪರೋಕ್ಷವಾಗಿ ನೆರವಾಗಿದ್ದಾರೆ.

೧೯೮೧ರ ಮೊದಲ ಭಾಗದಲ್ಲಿ ಜಮೀನ್ದಾರರ, ಪೋಲೀಸರ ದೌರ್ಜನ್ಯ—ಶೋಷಣೆಯನ್ನು ಪ್ರತಿಭಟಿಸಲು ಸ್ವತಂತ್ರವಾದ "ಕಿಸಾನ್ ಸಭಾ"ದ ಸ್ಥಾಪನೆಯಾಯಿತು. ಭೂಹೀನ ಕೃಷಿ ಕೂಲಿಕಾರರಿಗೆ ಭೂಮಿ ದೊರಕಬೇಕು; ಕೃಷಿ ಕೂಲಿಯಲ್ಲಿ ಹೆಚ್ಚಳವಾಗಬೇಕು; ಕೂಲಿಕಾರರ ವಿಶೇಷವಾಗಿ ದಲಿತ ಕೂಲಿಕಾರರ ಮೇಲಿನ ಶೋಷಣೆ ನಿಲ್ಲಬೇಕು; ಪೋಲೀಸ್ ದೌರ್ಜನ್ಯ ಕೊನೆಗೊಳ್ಳಬೇಕು ಎಂಬಿವೇ ಪ್ರಮುಖ ಉದ್ದೇಶಗಳಿಗಾಗಿ ದುಡಿಯತೊಡಗಿದ ಕಿಸಾನ್ ಸಭಾ ಪ್ರಭಾವ ದಿನೇ ದಿನೇ ಬೆಳೆಯತೊಡಗಿತು. ಭೋಜಪುರ ಜಿಲ್ಲೆಯ ಆರಾಸಹರದಲ್ಲಿ ಬಲಾಢ್ಯವಾಗಿ ಬೆಳೆದ ಕಿಸಾನ ಸಭಾ ರಾಜ್ಯದ ಇತರೆ ಜಿಲ್ಲೆಗಳಿಗೂ ಚಾಚಿಕೊಂಡಿತು. ತಮ್ಮ ಪಕ್ಷಗಳಿಗೆ ಸಹ ಅಡ್ಡಿಯಾಗಬಹುದೆಂದು ಭಾವಿಸಿದ ಸಿ.ಪಿ.ಐ. ಲೋಕದಳ ಹಾಗೂ ಕಾಂಗ್ರೆಸ್ ತಮ್ಮವೇ ರೀತಿಯ ಮಾರ್ಗಗಳಿಂದ ಶೋಷಿತ ಜನತೆಯ ಸಂಘಟನೆಯನ್ನು ಹತ್ತಿಕ್ಕುವ ಯತ್ನ ನಡೆಸಿದವು. ಯಾವುದಕ್ಕೂ ಬಗ್ಗದಾದಾಗ ಕಾಂಗ್ರೆಸ್ ಜಿಲ್ಲೆಯ ಜಮೀನ್ದಾರರ ಹಾಗೂ ಪೋಲೀಸ್ ಯಂತ್ರದಿಂದ ಶೋಷಿತ ಜನತೆಯನ್ನು ಸದೆಬಡಿಯುವ ಕ್ರಮಕ್ಕೆಗೊಂಡಿತು.

> **ಕೃಷಿಕೂಲಿಕಾರರಲ್ಲಿ ಅತಿ ಹೆಚ್ಚಿನ ಸಂಖ್ಯೆಯ ಜನ ದಲಿತರಾಗಿರುವುದರಿಂದ ಶೋಷಣೆಗೆ ಆರ್ಥಿಕ ರೂಪದ ಸಂಗಡ ಸಾಮಾಜಿಕ ರೂಪವೂ ಸೇರಿಕೊಂಡು ಬಿಟ್ಟಿದೆ. ಸಾಮಂತವಾದೀ ಜಮೀನ್ದಾರರು ರಾಜಕೀಯ ಕ್ಷೇತ್ರದ ಪ್ರಭಾವಶಾಲಿಗಳನ್ನೂ ಸರ್ಕಾರಿ ಅಧಿಕಾರಿಗಳನ್ನೂ, ಪೋಲೀಸ್ ಅಧಿಕಾರಿಗಳನ್ನೂ ಮುಷ್ಠಿಯಲ್ಲಿ ಹಿಡಿದಿಟ್ಟುಕೊಂಡಿರುವುದರಿಂದ ಶೋಷಿತ ಜನತೆ ದೌರ್ಜನ್ಯದ ವಿರುದ್ಧ ದನಿಎತ್ತಿದರೆ ಭಾರೀಬೆಲೆತೆರಬೇಕಾಗುತ್ತದೆ.**

೧೯೮೧ರ ಜೂನ್ ೯ರಂದು ನವಾದಾ ಪೋಲೀಸ್‌ಠಾಣೆಯ ಸಬ್‌ಇನ್ಸ್‌ಪೆಕ್ಟರ್ ಒಬ್ಬನು ಯುವಕ ವಿನಯಕುಮಾರನನ್ನು ಬಂಧಿಸಿ 'ಪೋಲೀಸ್ ಠಾಣೆಯಿಂದ ರಿವಾಲ್ವರ್ ಕದ್ದ' ಆರೋಪ ಹೊರಿಸಿ ಬಂಧನದಲ್ಲಿರಿಸಿದ. ಜಾತೀವಾದಿಯಾದ ಈ ಇನ್ಸ್‌ಪೆಕ್ಟರ್ ಹಾಗೂ ಇದೇ ಠಾಣೆಯ ಇನ್ನೊಬ್ಬ ಪೋಲೀಸ್ ಅಧಿಕಾರಿ ಛಾಯಾದೇವಿಯೆಂಬ ಹೆಂಗಸಿನೊಂದಿಗೆ ಅಕ್ರಮ ಸಂಬಂಧವಿರಿಸಿಕೊಂಡಿದ್ದರು. ವಾಸ್ತವವಾಗಿ ರಿವಾಲ್ವರ್‌ನ್ನು ಛಾಯಾದೇವಿ ಕದ್ದಿರುವುದು ಗೊತ್ತಾದಾಗ ಆಕೆಯನ್ನು ಪ್ರಶ್ನಿಸಲಾಯಿತು. ಆಕೆಯು ಅದನ್ನು ಮುನ್ನಾ ಎಂಬ ಯುವಕನ ಬಳಿ ನೀಡಿರುವುದಾಗಿಯೂ ಆ ಯುವಕನು ಅದನ್ನು ಕಾಂಗ್ರೆಸ್ ಶಾಸಕರೊಬ್ಬರ ಮಗನಿಗೆ ನೀಡಿರುವುದಾಗಿಯೂ ಗೊತ್ತಾದಾಗ ಇಡೀ ಪ್ರಕರಣವನ್ನು ಮುಚ್ಚಿಹಾಕಲಾಯಿತು. ಜೈಲಿನಲ್ಲಿ ಬಿದ್ದಿದ್ದ ವಿನಯಕುಮಾರನನ್ನು ಕಠೋರವಾಗಿ ಶಿಕ್ಷಿಸಲಾಗಿತ್ತಾದ್ದರಿಂದ ಅವನಿಗೆ ನಿಂತುಕೊಳ್ಳಲೂ ಸಾಧ್ಯವಾಗುತ್ತಿರಲಿಲ್ಲ. ಈ ಹಂತದಲ್ಲಿ ಕಿಸಾನ್ ಸಭಾದವರ ತೀವ್ರಗೊಂಡ ಪ್ರತಿಭಟನೆಯಿಂದ ವಿನಯಕುಮಾರ್‌ನನ್ನು ಬಿಡುಗಡೆ ಮಾಡಲಾಯಿತು.

**ಡಕಾಯಿತರ ಹಣೆಚೀಟಿ ಅಂಟಿಸಿ ಬಂಧನ:**

ಡುಮರಾಂವ್ ಎಂಬ ಹೋಬಳಿಯ ಮುಗಾಢ, ಕೇಸಠ ನವಾನಗರ, ಚೌಂಗಾಯಿ ಮೊದಲಾದ ಗ್ರಾಮಗಳಲ್ಲಿ ಪೋಲೀಸ್ ದೌರ್ಜನ್ಯ ಹೆಚ್ಚಾದಾಗ ಕಿಸಾನ್ ಸಭಾದ ನಾಯಕ ಗೋವಿಂದ ತಿವಾರಿ ವ್ಯಾಪಕ ಕಾರ್ಯಕ್ರಮ ಹಾಕಿದರು. ಪರಿಣಾಮವಾಗಿ ಔಷಧಿ ಅಂಗಡಿಯಲ್ಲಿದ್ದ ತಿವಾರಿಯವರನ್ನು ಠಾಣೆಗೆ ಕರೆಯಿಸಿ ಸುಳ್ಳುಕೇಸ್‌ಗಳಲ್ಲಿ ಸಿಲುಕಿಸಿ ಬಂಧಿಸಲಾಯಿತು. ಠಾಣೆಯಲ್ಲಿ ಚೆನ್ನಾಗಿ ಥಳಿಸಲಾಯಿತು. ೨೪ ಜುಲೈ ೮೧ರಂದು ನಡೆದ ಈ ಘಟನೆಯ ಬಗ್ಗೆ ಕುಪಿತರಾದ ಜನತೆ ೨೬ರಂದು ಪೋಲೀಸ್‌ಠಾಣೆಯ ಮುಂದೆ ಪ್ರದರ್ಶನ ನಡೆಸಿದರು. ಜನಜಂಗುಳಿಯನ್ನು ಕಂಡ ಠಾಣೆಯ ಸಬ್ ಇನಸ್ಪೆಕ್ಟರ್ ಗುಂಡು ಹಾರಿಸುವ ಬೆದರಿಕೆ ತೋರಿಸಿ ಅಶ್ರುವಾಯು ಸಿಡಿಸಿದ. ಅನಂತರ ರಾಮನಾರಾಯಣ ಮತ್ತು ಇನ್ನೊಬ್ಬ ಕಿಸಾನ್ ಸಭಾ ನಾಯಕರನ್ನು 'ಡಕಾಯಿತರ ಹಣೆ ಚೀಟಿ ಅಂಟಿಸಿ' ಬಂಧಿಸಲಾಯಿತು. ೩೦-೭-೮೧ರಂದು ಬಕ್ಸರ್‌ನಲ್ಲಿ ತಾಲ್ಲೂಕು ಕಚೇರಿಯ ಮುಂದೆ ಸಾವಿರಾರು ಜನರು ತಮ್ಮ ಪ್ರತಿಭಟನೆ ಸೂಚಿಸಿದರು.

ಜಿಲ್ಲೆಯ ಸರ್ವೆಯಾ ಭಾಗದಲ್ಲಿ ಜನಪ್ರಿಯರಾಗಿರುವ ಡಾ. ರಾಮಾಸನ ಸಿಂಹ ಅವರು ಜನತೆಯನ್ನು ಪ್ರಜ್ಞಾವಂತರನ್ನಾಗಿ ಮಾಡಿ ಕಿಸಾನ್‌ಸಭಾ ಕಾರ್ಯ ಮಾಡುತ್ತಿದ್ದುದನ್ನು ಸಹಿಸದ ಪೋಲೀಸ್ ಅಧಿಕಾರಿಗಳು, ಡಕಾಯತರಿಗೆ ಆಶ್ರಯ ನೀಡುವರೆಂಬ ಆಪಾದನೆ ಹೊರಿಸಿ ಬಂಧಿಸಲಾಯಿತು. ಬಂಧಿಸುವ

## ಹೊರರಾಜ್ಯಗಳಲ್ಲಿ

ಸಮಯದಲ್ಲಿ ಅವರು ಗರ್ಭಿಣಿಯರಿಬ್ಬರನ್ನು ಪರೀಕ್ಷಿಸುತ್ತಿದ್ದರು; ಅವರ ಪರೀಕ್ಷೆ ಮುಗಿಯುವವರೆಗೂ ಸಹ ಕಾಯದ ಪೋಲೀಸರು ಆ ಕ್ಷಣವೇ ಡಾ. ರಾಮಾಸನ ಸಿಂಹರನ್ನು ಕರೆದೊಯ್ದರು.

**ದಲಿತ ಕೂಲಿಕಾರನಿಗೆ ಜೈಲು :**

ಬಿಹಾರ–ಉತ್ತರ ಪ್ರದೇಶಗಳ ಗಡಿಭಾಗದಲ್ಲಿರುವ ಗ್ರಾಮ ರಾಮಪುರ. ಈ ಗ್ರಾಮದ ಜಮೀನ್ದಾರ ವಶಿಷ್ಠರಾಯ್ ಪ್ರಭಾವೀ ವ್ಯಕ್ತಿ. ಈ ಭಾಗದ ಕೃಷಿಕೂಲಿಕಾರರನ್ನು ಸಂಘಟಿಸಿ ಹೆಚ್ಚಿನ ಕೂಲಿಗಾಗಿ ಸಂಘರ್ಷ ನಡೆಸಿದ್ದ ದಲಿತ ಕೂಲಿಕಾರ ರಾಮಾಧಾರ ರಾಮನನ್ನು ಬಂಧಿಸಲು ವಶಿಷ್ಠರಾಯ್ ಬಿಹಾರದ ರಾಜಪುರ ಠಾಣೆಯ ಹಾಗೂ ಉತ್ತರಪ್ರದೇಶದ ಗಹಮರ್ ಠಾಣೆಯ ಪೋಲೀಸ್ ಅಧಿಕಾರಿಗಳನ್ನು ಕೇಳಿಕೊಂಡಿದ್ದರಿಂದ ರಾಮಾಧಾರ ರಾಮ ಅವರ ಬಂಧನವಾಯಿತು. ರಾಂ ಬಹು ದಿನಗಳಿಂದ ಕೂಲಿಕಾರರಲ್ಲಿ ಪ್ರಜ್ಞೆ ಮೂಡಿಸುವ ಕಾರ್ಯವನ್ನು ಮಾಡುತ್ತಿದ್ದುದರಿಂದ ಜಮೀನ್ದಾರ ವಶಿಷ್ಠರಾಯ್ ಬೇರೆ ದಾರಿಯಿಲ್ಲದೇ ಹೆಚ್ಚು ಕೂಲಿ ನೀಡಿ ಕೂಲಿಕಾರರನ್ನು ಪಡೆಯಬೇಕಾಗಿತ್ತು.

ರಾಮಾಧರ ರಾಂ ಬಂಧನ ವಿರೋಧಿಸಿ ಬೃಹತ್ ಜಾಥಾ ನಡೆಯಿತು. ಸಹಿಸಂಗ್ರಹಣೆ ನಡೆದು ರಾಜ್ಯದ ಹಿರಿಯ ಅಧಿಕಾರಿಗಳಿಗೆ ಸಲ್ಲಿಸಲಾಯಿತು. ಆದರೆ ಜಿಲ್ಲೆಯ ಜಮೀನ್ದಾರರಿಂದ ದುಡ್ಡು ತಿಂದಿರುವ ಪೋಲೀಸ್ ಅಧಿಕಾರಿಗಳು ರಾಮಾಧಾರ ರಾಮನನ್ನು ಜೈಲಿನೊಳಗೆ ಹಿಡಿದಿಟ್ಟಿದ್ದಾರೆ.

ಆದರೆ ಜನತೆಯಲ್ಲಿ ಬೆಳೆಯುತ್ತಿರುವ ಪ್ರಜ್ಞೆಯನ್ನು ಹಿಡಿದಿಡಲು ಯಾರಿಂದಲೂ ಆಗುತ್ತಿಲ್ಲ. ಪೋಲೀಸ್ ಜಮೀನ್ದಾರರ ದೌರ್ಜನ್ಯದ ವಿರುದ್ಧ ಜನಾಂದೋಲನ ರೂಪುಗೊಳ್ಳುತ್ತಿದೆ. ಶೋಷಿತ ಜನತೆ ಒಂದುಗೂಡಿ ಸಂಘರ್ಷದ ದಿಶೆಯತ್ತ ಹೆಜ್ಜೆಯಿಡುತ್ತಿದ್ದಾರೆ.

# ಹಸಿವು ನನ್ನ ತಿಂದ ದಿನ....

ನನ್ನ ಸಂಬಂಧಿಕರೊಬ್ಬರ ಮನೆಯೊಂದರಲ್ಲಿ ಪಂಚಮ ಪತ್ರಿಕೆ ಓದುತ್ತಾ ಕುಳಿತಿದ್ದೆ. ಅದೇ ತಾನೆ ಶಾಲೆ ಮುಗಿಸಿಕೊಂಡು ಬಂದ ಮಾದಯ್ಯ ಮಾಸ್ತರರು ಪತ್ರಿಕೆಯನ್ನು ನೋಡಿ ಕುತೂಹಲಗೊಂಡರು 'ಅನುಭವದ ಗಣಿಯಿಂದ' ಎಂಬ ಕಾಲಂ ನೋಡಿ "ನಾನು ಭಯಂಕರ ಅಸ್ಪೃಶ್ಯತೆ ಅನುಭವಿಸಿದ್ದೇನೆ" ಎಂದರು.

ನಿಮ್ಮ ಜೀವಮಾನದಲ್ಲಿ ನಡೆದಿರೋ ಯಾವುದಾದರೂ ಘಟನೆ ಹೇಳಿ ಎಂದೆ. ಹೇಳತೊಡಗಿದರು.

ನಾನು ಹಳ್ಳಿಯೊಂದರ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವ ಕಾಲವದು. ಬಡತನ ಹೆಚ್ಚಾದ್ದರಿಂದ ಕೂಲಿಮಾಡಿ ಜೀವನ ಮಾಡುವುದಕ್ಕಾಗಿ ಒಂದು ವರ್ಷ ಶಾಲೆ ಬಿಟ್ಟೆ. ಬರಗಾಲದ ಬೇಸಿಗೆಯ ಉರಿಬಿಸಿಲು ನನ್ನೂರು, ಕೇರಿ ನೆಲವನ್ನು ಸುಡತ್ತಿತ್ತು. ಆ ವರ್ಷದಲ್ಲಿ ಭಾರಿ ಕಷ್ಟ ಅನುಭವಿಸಿದ್ದೇನೆ. ದೇವನೂರಿನಲ್ಲಿ ಲಿಂಗಾಯುತ ದೊಡ್ಡದ್ಯಾವಪ್ಪನೆಂಬುವವರು ನನಗೆ ಪರಿಚಯಸ್ಥರಿದ್ದರು, ಅವರಿಗೆ ನಾನು ತುಂಬಾ ವಿಧೇಯನಾದ ಹೈದನಾಗಿದ್ದೆ. ಅವರು ವಯಸ್ಸಿನಲ್ಲಿ ನನಗಿಂತ ಹಿರಿಯರು ಆಗಿದ್ದರು. ನಾನು ಹಿಪ್ಪನೇರಳೆ ಸೊಪ್ಪು ಕೀಳುವುದರಲ್ಲಿ ತುಂಬಾ ಚತುರನಾಗಿರುವುದು ಅವರಿಗೆ ತಿಳಿದಿತ್ತು. ಎಷ್ಟೋ ಸಾರಿ ತಮ್ಮ ಹೊಲಗಳಿಗೆ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ಅವಾಗ ಸೊಪ್ಪುಕೀಳುವುದು ನನ್ನ ಪಾಲಿಗೆ ಬರುತ್ತಿತ್ತು. ನಾನು ಸೊಪ್ಪುಕೀಳುವ ಕೈಚಳಕವನ್ನು ನೋಡಿ "ಏನಯ್ಯ ಮಾದ ಇಷ್ಟೊಂದು ಚಂದಾಗಿ ಸೊಪ್ಪುಕೀಳ್ತಿಯ. ನಿನ್ನ ಸಮ ನಮ್ಮೂರಲ್ಲಿ ಯಾವ ಗಂಡ್ಸು ಕೀಳಲಾರ ಎಂದಕೂಡಲೆ ನನ್ನ ಎದೆ ಉಬ್ಬಿಕೊಳ್ಳುತ್ತಿತ್ತು. ಕೈಚರ್ಮ ಕೀಳುವುದನ್ನು ಲೆಕ್ಕಿಸದೆ ಭಾರಿ ಉತ್ಸಾಹದಿಂದ ಸೊಪ್ಪುಕೀಳುತ್ತಿದ್ದೆ. ನಂತರ ಸೊಪ್ಪಿನ ಚೀಲವನ್ನು ಹೊತ್ಕೊಂಡು ಅವರ ಹಟ್ಟಿಗೆ ಬರುತ್ತಿದ್ದೆ. ಬಂದ ಕೂಡಲೆ ಅವರ ಹಟ್ಟಿಯ ಹೆಂಗಸು "ಮಾದಯ್ಯ ಆ ಕೊಟ್ಟಿಗೆ ತೊಲೆ ಮೇಲೆ ಕಂಟೆ (ಕಾಯಿನ ಕರಟೆ) ಇಟ್ಟಿವಿನಿ ತಕ್ಕ ಟೀ ಕುಡಿಯುವಂತೆ ಎನ್ನತ್ತಿದ್ದರು.

ನಾನು ಆ ಧ್ವನಿಯ ಕೇಳಿ ಉಲ್ಲಾಸಗೊಳ್ಳುತ್ತಿದ್ದೆ. ಕೊಟ್ಟಿಗೆಯತೆ ಾಲೆಮೇಲೆ ಧೂಳು ತುಂಬಿಕೊಂಡಿರುವ ಕಂಟೆಯನ್ನು ತೆಗೆದುಕೊಳ್ಳುತ್ತಿದ್ದೆ. ನನ್ನಂತೆ ಮಾಸಲಾಗಿದ್ದ ಕಂಟೆಯು ಟೀ ಕುಡಿಯಲು ನನಗೆ ಸ್ಟೀಲ್ ಗ್ಲಾಸಿನಂತೆ ಉಪಯೋಗವಾಗುತಿತ್ತು.

ದನದ ಕೊಟ್ಟಿಗೆಯ ಗೋತ್ರದ ಗುಂಡಿಯ ಪಕ್ಕದಲ್ಲಿ ಕುಳಿತು ಕಂಟೆಯನ್ನು ಹಿಡಿದುಕೊಂಡು ಟೀಗಾಗಿ ಕಾಯುತ್ತಿದ್ದೆ. ಆವಾಗ ಅವರ ದನಗಳಿಗೂ ನನಗೂ ವ್ಯತ್ಯಾಸವೆ ಕಾಣುತ್ತಿರಲಿಲ್ಲ. ದೂರದಲ್ಲಿ ನಿಂತು ಆ ಹೆಂಗುಸು ನಾನು ಹಿಡಿದಿರುವ ಕಂಟಕ್ಕೆ ಟೀ ಸುರಿಯುತ್ತಿದ್ದಳು. ಎಷ್ಟು ಬಿಸಿಯಾಗಿ ಕೈಸುಡುತ್ತಿದ್ದರೂ ಕಂಟೆಯನ್ನು ನೆಲದ ಮೇಲೆ ಮಡಗುವ ಹಾಗಿಲ್ಲ. ಕಂಟೆಯ ಅಡಿಪಾಯ ಪುಟ್ಟವಿಲ್ಲದ ಪ್ರಯುಕ್ತ ಅದು ನೆಲದ ಮೇಲೆ ಕೂರುತ್ತಿರಲಿಲ್ಲ. ಆದ್ದರಿಂದ ಎಷ್ಟೇ ಬಿಸಿಯಾಗಿ ಕೈಸುಟ್ಟರೂ ಸಹಿಸಿಕೊಂಡು ಟೀ ಕುಡಿಯಬೇಕು.

## ಅನುಭವದ ಗಣಿಯಿಂದ

ನಾನು ಅವರ ಹುಳುವಿಗೆ ಸೊಪ್ಪು ಹಾಕಬೇಕಾದಾಗ, ಅವರ ಹಜಾರಕ್ಕೆ ಹೋಗ ಬಹುದಿತ್ತು. ಯಾಕೆಂದರೆ ಹುಳುವಿರುತ್ತಿದ್ದದು ಹಜಾರದಲ್ಲಿ. ಅದನ್ನು ಬದಲಾಯಿಸಲು ಸಾಧ್ಯವಿರಲಿಲ್ಲ. ನನ್ನ ಕೆಲಸವು ಅಗತ್ಯವಾದ್ದರಿಂದ ಅಲ್ಲಿಗೆ ಹೋಗ ಬಹುದಿತ್ತು, ಆದರೆ ಟೀ ಕುಡಿಯಲು ದನದ ಕೊಟ್ಟಿಗೆಗೆ ಕಳುಹಿಸುತ್ತಿದ್ದರು.

"ಯಾಕೆ ನಿಮಗೆ ಕೂಲಿ ಜಾಸ್ತಿ ಕೊಡ್ತಾ ಇದ್ರೂ ಅಥವಾ ಹಂಗಿಗಾಗಿ ಹೋಗುತ್ತಿದ್ರೊ ಎಂದು ನಡುವೆ ಪ್ರಶ್ನೆ ಕೇಳಿದೆ.

ನಿಜಹೇಳಬೇಕೆಂದರೆ, ನಾನು ಅವರಟ್ಟಿಯ ಟೀ ಕುಡಿಯೋದು ತುಂಬಾ ಆಸೆಯಿತ್ತು. ನಮ್ಮ ಮನೆಗಳಲ್ಲಿ ಅಂಥ ಗಟ್ಟಿ ಟೀ ಕಾಯಿಸುತ್ತಿರಲಿಲ್ಲ ಜೊತೆಗೆ ಆ ದಿನಗಳಲ್ಲಿ ಹಸಿವು ನನ್ನನ್ನೇ ತಿನ್ನುತ್ತಿರುವಂತೆ ಕಾಣುತಿತ್ತು, ನಮ್ಮ ಹಟ್ಟಿಗಳಲ್ಲಿ ತಂದೆ ತಾಯಿಗಳು ನಾನು ಎಲ್ಲಿಗೆ ಹೋಗಿ ಏನು ಮಾಡಿದರೂ, ಎಲ್ಲಿ ತಂಗಿದರೂ ಕೇಳುತ್ತಿರಲಿಲ್ಲ. ಅವರಿಗೆ ನನ್ನ ಜೀವನ ಕಳೆದರೆ ಅದೇ ಸಾಕಾಗಿತ್ತು, ನನ್ನ ಚಿಂತೆ ಅಷ್ಟೊಂದು ಇರಲಿಲ್ಲ. ನನ್ನ ಹೊಟ್ಟೆಪಾಡು ಎಲ್ಲಾದರೂ ತುಂಬಿಕೊಂಡರೆ ಅವರಿಗೆ ಅದೇ ಸಂತೋಷ.

**—ನಂಜನಹಳ್ಳಿ ನಾರಾಯಣ**

# ಕೋಲಾರದ ಕಲ್ಲೆದೆಯ ಮೇಲೆ ದಲಿತ ತ

ಉರಿಬಿಸಿಲಿನ ಬೆಂಕಿಯಲ್ಲಿ ಮೈ ಕೊಡವಿಕೊಂಡೆದ್ದ ತಮಟೆಯೊಂದು ಸದ್ದು ಹೊರಡಿಸಿತು. ಒಡನೆಯೇ ಗೋಡೆಗೊರಗಿದ್ದ, ಹೆಗಲುಗಳಿಗೆ ಜೋತುಬಿದ್ದಿದ್ದ ನೂರಾರು ತಮಟೆಗಳೆಲ್ಲ ಒಮ್ಮೆಗೇ ಸಪ್ಪುಳ ಮಾಡಿದವು, ಯಾರ ಮಾತು ಯಾರಿಗೂ ಕೇಳಿಸದಾಯಿತು. ಆಗ ದೇವನೂರ ಮಹದೇವ್ ತಮಟೆ ಬಡಿದು ಕಾರ್ಯಕ್ರಮವನ್ನು ಉದ್ಘಾಟಿಸಿದರು. ತಮಟೆಯ ಶಬ್ದವನ್ನೂ ಮೀರಿಕೊಂಡು 'ಅಂಬೇಡ್ಕರ್ ಜಿಂದಾಬಾದ್' ಘೋಷಣೆಗಳು ಗುಡುಗಿದವು. ಕೋಲಾರ ಜಿಲ್ಲಾ ದಲಿತ ಕಲಾ ಮೇಳದ ಮೆರವಣಿಗೆಯ ಪುರುಷ ಸಿಂಹನಿಗೆ ಸಾವಿರ ಸಾವಿರ ಕಾಲುಗಳು ಬಂದವು. ಮೂರು ಸಾವಿರ ವರ್ಷಗಳಿಂದಲೂ ದಮನಗೊಂಡಿದ್ದ ನೆತ್ತರು, ನರನಾಡಿನಲ್ಲಿ ಕಾರಂಜಿಯಾಗಿ ಪುಟಿಯಿತು. ಕಲೆಗೆ ಸೇದಿಹೋಗಿದ್ದ ಕೈಕಾಲು, ಮುಖಗಳು ಮೂಡತೊಡಗಿದವು. ಬೆಂಗಳೂರಿನ ರೂಪ

## ಕಣ್ಣಾರೆ ವರದಿ

**ಲಕ್ಷ್ಮೀಪತಿ ಮತ್ತು ಜಗನ್ನಾಥ್**

ಧ್ವನಿಯ ಗೆಳೆಯರು ಇದಿಷ್ಟನ್ನು ಚಿತ್ರೀಕರಿಸಿಕೊಳ್ಳುತ್ತಿದ್ದಂತೆಯೇ, ಎಂದಿನಿಂದಲೋ ಹುರಿಗೊಳಿಸಿಕೊಂಡಿದ್ದ ಮನಸ್ಸುಗಳೊಂದಿಗಿನ ದಲಿತ ಕಲೆಗಳ ಬೃಹತ್ ಮೆರವಣಿಗೆ ಡಾಂಬರು ರಸ್ತೆಗೆ ಹರಿಯಿತು.

ಕೊಲೆ, ಭೂವಿವಾದ, ಅತ್ಯಾಚಾರ, ಸಾಮಾಜಿಕ ಬಹಿಷ್ಕಾರದಂತ ಕೋಲಾರದ ಬೆಂಕಿ ಸಮಸ್ಯೆಗಳು ಮನಸ್ಸಿದ್ದವರ ಮೆದುಳನ್ನು, ಕಣ್ಣು ಕಿವಿಯಿದ್ದವರ ಕರುಳನ್ನು ಗಾಂಧಾರಿಯ ಪಿಂಡದಂತೆ ತುಕುಡ ತುಕುಡಗಳಾಗಿ ಮಾಡಿದ್ದವು. ಬಗೆದರೂ ಇತಹಪ್ಪುಗಳಿಂದ ಭದ್ರತೆಯೆಂಬುದೇ ಸಿಗದ ನೋವು, ಅಸಹನೆಯೊಂದಿಗೆ ದಲಿತ ದಂಡು ಬೀದಿಗಿಳಿದಿತ್ತು. ಎಲ್ಲ ಬಗೆಯ ಕ್ರೌರ್ಯಗಳ ವಿರುದ್ಧ ಪ್ರತಿಭಟನೆಯ ಅಚ್ಚೊತ್ತಿದ್ದ ಕಪ್ಪು ಕಾಲುಗಳು ಇಲ್ಲಿನ ಪ್ರತಿರಸ್ತೆಗೂ ಗೊತ್ತು. ದಲಿತ ಕಲಾ ಮೇಳದಂದು ಅದೇ ರಸ್ತೆಯ ಮೇಲೆ ತಾಂಡವಿಸುತ್ತಿದ್ದ ಕಾಲುಗಳು ಕಲೆಯ ಲಲಿತ ರಂಗೋಲಿಗಳನ್ನು ಹಚ್ಚಿದವು. ಪ್ರತಿಭಟನೆಯೊಂದಿಗೆ ಈಗ ನೆರಿಕೆ ಕಾಲುಗಳಿಂದ ಕಲೆಯ ಬರವಣಿಗೆ. ಮೆರವಣಿಗೆಯ ಉದ್ದಕ್ಕೂ ನೀರಮೇಲೆ ಹರಿದಾಡುವ 'ಕೋಲಾಟದ ಬೂಚಿ' ಗಳಂತೆ ಕಾಲುಗಳು ನರ್ತಿಸುತ್ತಿದ್ದವು. ತಮಟೆಯ ಗರ್ಜನೆಗಳು ಜಮೀನ್ದಾರೀ ಎದೆಗಳಿಗೆ ಲಗ್ಗೆ ಹಾಕಿದ್ದವು, ಇಡೀ ಮೆರವಣಿಗೆಯನ್ನು ಆವರಿಸಿಕೊಂಡಿದ್ದ ಅಖಂಡ ಹುಮ್ಮಸ್ಸು ಸಂಘಟನಾತ್ಮಕ ಮನೋಭಾವದ ಹಿಂದಿದ್ದ ಅನಿವಾರ್ಯತೆಯನ್ನು ಧ್ವನಿಸುತ್ತಿತ್ತು.

ಕಲಾಮೇಳದಂದು ಬೆಳಗ್ಗೆ ದಲಿತ ಕಲೆಗಳ ವಿಚಾರಗೋಷ್ಠಿಯನ್ನು ಉದ್ಘಾಟಿಸಿ ಮಾತನಾಡಿದ ಇಂದೂಧರ ಹೊನ್ನಾಪುರ ಅವರು ದಲಿತರಂತೆಯೇ ದಾಸ್ಯಕ್ಕೆ ಒಳಗಾಗಿರುವ ದಲಿತ ಕಲೆಗಳ ಬಗ್ಗೆ ಸ್ವಾಭಿಮಾನವನ್ನು ಬೆಳೆಸಿಕೊಳ್ಳಬೇಕೆಂದರಲ್ಲದೆ, ಸಾಮಾಜಿಕ ಬದಲಾವಣೆಗಾಗಿ ದಲಿತ ಕಲೆಗಳನ್ನು ಸಜ್ಜುಗೊಳಿಸಬೇಕಾದ ಅಗತ್ಯತೆಯ ಬಗ್ಗೆ ತಿಳಿಸಿದರು. ಈ ಮಾತಿಗೆ ಪೂರಕವಾಗಿಯೆಂಬಂತೆ ಕವಿಸಿದ್ಧಲಿಂಗಯ್ಯನವರು ಪ್ರತಿಭಟನೆಯ ಕೂಗಾಗಿರುವ ದಲಿತ ಕಲೆಗಳಲ್ಲಿನ ದೈವಿಕ ಅಂಶಗಳನ್ನು ತೊರೆಯಲು ಕರೆನೀಡಿದರು. ಪೂಜಾರಿಗಳಿಗೂ ಕೂಡ ಮಾಸಾಶನ ನೀಡುತ್ತಿರುವಾಗ ಸರ್ಕಾರ ಮತ್ತು ಅಕಾಡಮಿಗಳು ದಲಿತ ಕಲೆ ಮತ್ತು ಕಲಾವಿದರಿಗೆ ಪ್ರೋತ್ಸಾಹ ಕೊಡದಿರುವ ದಲಿತ ವಿರೋಧಿ ನೀತಿಯನ್ನು ಖಂಡಿಸಿದರು. ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ದಲಿತ ಸಂಘರ್ಷಸಮಿತಿಯ ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪನವರು ಅದ್ಭುತ ಕಲಾ ಕೌಶಲ್ಯಗಳನ್ನೊಳಗೊಂಡಿರುವ ದಲಿತ ಕಲೆಗಳನ್ನು ಕೀಳಾಗಿ ಕಾಣುವುದನ್ನು ಖಂಡಿಸಿದರಲ್ಲದೆ ದೇಶದಲ್ಲಿನ ಆರೆಸ್ಸೆಸ್ ಮತ್ತು ಕಾಂಗ್ರೆಸ್ ಎಂಬ ಎರಡು ರಾಕ್ಷಸ ಶಕ್ತಿಗಳ ವಿರುದ್ಧ ಬಂಡೇಳದೆ ದಲಿತರಿಗೆ ವಿಮೋಚನೆ ಕನಸಿನ ಮಾತೆಂದು ತಿಳಿಸಿದರು.

ಸಂಜೆ ನಡೆದ ಬಹಿರಂಗ ಸಭೆಯಲ್ಲಿ ಪತ್ರಕರ್ತ ಪಿ. ಲಂಕೇಶ್‌ರವರು ದಲಿತರನ್ನು ಪ್ರತಿಭೆ ರಾಕ್ಷಸ ಶಕ್ತಿ ಮತ್ತು ಹೊಳೆಯುವ ಕಣ್ಣುಗಳವರೆಂದು ಬಣ್ಣಿಸಿದರು. ಈ ಮಾತು ಅಕ್ಷರಶಃ ಸತ್ಯವೆನ್ನುವುದಕ್ಕೆ ಮೆರವಣಿಗೆಯಲ್ಲಿ ಕಂಡುಬಂದ ಒಂದು ವಿಸ್ಮಯ ಸಾಕ್ಷಿ. ಮೆರವಣಿಗೆ ನಚಿಕೇತ ನಿಲಯದಿಂದ ಅರ್ಧ ಫರ್ಲಾಂಗು ದೂರ ಬರುವುದರೊಳಗೇ ತಮಟೆ ಬಡಿಯುತ್ತಿದ್ದ ಗೆಳೆಯ ಮುನಾಂಜಿಯ (ಮುನಿ ಆಂಜನಪ್ಪ) ಬೆರಳುಗಳಿಂದ ಚಿಮ್ಮುತ್ತಿದ್ದ ನೆತ್ತರು ತಮಟೆಯನ್ನು ಕೆಂಪಾಗಿಸಿತ್ತು. ತಮಟೆಯೇ ತಾನಾಗಿದ್ದ ಸ್ಥಿತಿಯಲ್ಲಿದ್ದ ಮುನಾಂಜಿಗೆ ಬೆರಳುಗಳ ಮಾಂಸ ಸವೆದದ್ದೂ ಗೊತ್ತಾದಂತಿರಲಿಲ್ಲ. ತಮಟೆ ಬಡಿಯುವುದನ್ನೂ ನಿಲ್ಲಿಸುವಂತೆ ಮಾಡಿಕೊಂಡ ಮನವಿಗಳು ಹಲಗೆ ಆವಾಹನೆಗೊಂಡಿದ್ದವನಿಗೆ ಹಿಡಿಸಲಿಲ್ಲ. ಇಂಥ ಹಲ

ಮುನಾಂಜಿಗಳು ಕಲಾ ಮೆರವಣಿಗೆಯಲ್ಲಿ

ಇಲ್ಲಿ ಮುಖ್ಯವಾಗುವುದು ತನ್ನ ಪ್ರೀ

ವಾದ್ಯದೊಂದಿಗೆ ಮುನಾಂಜಿಗೆ ಸಾಧ್ಯ

ತಾದಾತ್ಮ್ಯತೆ. ಲಂಕೇಶ್ ಹೇಳಿದಂತೆ '

ಕಲಾಗ್ರಕಾರಗಳು ದಲಿತರ ವಾಸ್ತವಿಕ

ಯನ್ನು ಸಮಾಜಕ್ಕೆ ರಾಚುತ್ತವೆ' ಎನ

ಮಾತು ನಿಜ ಅನ್ನಿಸಿತು. ದಲಿತರ ನೊ

ಸಮಾನವಾಗಿ ಸ್ಪಂದಿಸಬಲ್ಲ ವಾದ್ಯ-

ತುಡಿತಗಳನ್ನು ಮೀಟಬಲ್ಲ ಹಲಗೆಯೊ

ಹಲಗೆ ದಲಿತರ ತಲ್ಲಣಗೊಂಡ ಮನಸ್ಸು

ಆಳ ಸಂಕೇತ ತಾನೆ?

ಮೆರವಣಿಗೆಯಲ್ಲಿ ಬರುತ್ತಿದ್ದಾಗ ಮು

ರಸ್ತೆಯಲ್ಲೊಬ್ಬ, ಶಿಸ್ತು, ಮ್ಯಾನರ್ಸ್

ಮೂರ್ಖತನವನ್ನು ಕೊರೆಯುತ್ತ ಕಲಾ

ರ್ಶನವನ್ನು ಜರೆಯುತ್ತಿದ್ದ. ಈ ಶಿ

---

ಅವಳ ಹೆಸರು ಎಂಜೆಲಾಡೇವಿಸ್. ಸು

ನೀಗ್ರೋ ಯುವತಿ. ಅವಳ ತಂದೆ ಅಮೇ

ದಲ್ಲಿ ವಾಸಿಸುವ ಕೆಲವೇ ಕೆಲ ನೀಗ

ಶ್ರೀಮಂತರಲ್ಲಿ ಒಬ್ಬನು. ಚಿಕ್ಕಂದಿನಿಂದ

ಅವಳಿಗೆ ವಿದ್ಯಾಭ್ಯಾಸದ ಮೇಲೆ ತು

ಆಸಕ್ತಿ. ಉನ್ನತ ವಿದ್ಯಾಭ್ಯಾಸ ಮ

ನಂತರ ತತ್ವಶಾಸ್ತ್ರವನ್ನು ಅಭ್ಯಾಸಿಸಲು ಅ

ಜರ್ಮನಿಗೂ ಹೋಗಿಬಂದಿದ್ದಳು. 19

ವರೆಗೂ ಅವಳಿಗೆ ರಾಜಕೀಯದಲ್ಲಿ ಏನೇ

ತಿಳಿಯದು. ಆದರೆ ಒಂದು ರಾತ್ರಿ ನೀಗ

ಜನರು ಮಾತ್ರ ವಾಸಿಸುವ ಬೀದಿಯಲ್ಲಿ

ಕಿರಾತರ ಬಿಳಿಯರು ದಾಳಿ ಮಾಡಿ ಬಾ

ಗಳನ್ನು ಸಿಡಿಸಿ ಮನೆಗಳಿಗೆ ಬೆಂಕಿ ಹಚ್ಚಿ

ಈ ಮಾರಣ ಹೋಮದಲ್ಲಿ ನಾಲ್ವರು ನೀಗ

ಹಸುಕಂದಮ್ಮಗಳು ಸಾವನ್ನಪ್ಪಿದವು. ಆ

ಕೂಸುಗಳ ಶವಗಳನ್ನು ಕಣ್ಣಾರೆ ಕಂಡ ಎಂ

ಹೃದಯದಲ್ಲಿ ಪ್ರತೀಕಾರದ ಜ್ವಾಲೆ.

ಯೂನಿವರ್ಸಿಟಿಯಲ್ಲಿ ಓದುತ್ತಲೇ ಅ

ನೀಗ್ರೋ ಯುವತಿಯರನ್ನು ಆ ನ್ಯಾಯ

ವಿರುದ್ಧ ಸಿಡಿದೇಳುವಂತೆ ಪ್ರೇರೇಪಿಸಿ

ಅವಳ ಕೂಗಿಗೆ ಪ್ರೇರಿತರಾಗಿ ಅದೆಷ್ಟೋ

# ತೆಯ ಕುಣಿತ

## ಕಲಾಮೇಳದ ವರದಿ

ಪಾಯಿ ಯಾವ ಪಾಳೆಯದವನೆಂದು ಆದಾ
ಗಲೇ ಊಹಿಸಿದ್ದ ನಾನು ಅವನೊಂದಿಗೆ ಮಾತ
ಾಡಿದರೂ ಬರೀ ವ್ಯರ್ಥವಾದೀತೆಂದು
ಾವಿಸಿ ಮುನ್ನಡೆದಿದ್ದೆ. ಆದರೂ ಅವನ ಬಗ್ಗೆ
ರೇ ಯೋಚಿಸುತ್ತ ದಲಿತ ಸಮೂಹದ ಬಗ್ಗೆ
ಅವನಿಗಿರಬಹುದಾದ ಪೂರ್ವಾಗ್ರಹಗಳ ಆಳ
ದಲ್ಲಿ ಏನಿದೆಯೆಂದೇ ತೋಚದೆ ಮೈ ಪರಚಿ
ಕೊಳ್ಳುವಂತಾಯಿತು. ಬಹುಶಃ ದಲಿತರ
ಮನಿಗಳಲ್ಲಿನ ಮಾನವೀಯ ಯೋಚನೆಗಳು
ರ್ಥವಾಗಲು ಕೂಡ ಈ ಶಿಸ್ತಿನ ಕುನ್ನಿಗೆ
ಷ್ಟು ಶತಮಾನಗಳು ಬೇಕಾಗಬಹುದು? ಕಿವಿ
ಯಲ್ಲಿ ಹಲಗೆಯೇ ತುಂಬಿದ್ದರೂ ಮನಸ್ಸನ್ನು
ಂಥವೇ ನೋವಿನ ಆಲೋಚನೆಗಳು ಆಕ್ರಮಿ
ದ್ದವು.

ಕಲಾಮೇಳ ಬಹಿರಂಗ ಸಭೆಯಲ್ಲಿ ಬರಗೂರ
ು ಹೇಳಿದಂತೆ ಮನುಷ್ಯ ಕೇಂದ್ರಿತ ಹೋರಾಟ

ಅಗತ್ಯವೆಂಬ ಮಾತು ಎಂಥ ಸತ್ಯ ಅನ್ನಿಸಿತು. ಮುಂದುವರಿದ ರಾಮಚಂದ್ರಪ್ಪನವರು ತಮಟೆಯ ಸದ್ದು ವಿಧಾನಸೌಧದ ಕುರ್ಚಿಗಳನ್ನು ಅಲ್ಲಾಡಿಸುವಂತಾಗಲಿ ಎಂಬ ಆಶಯವನ್ನು ವ್ಯಕ್ತಪಡಿಸಿದರು. ಜೊತೆಗೆ ಈ ದೇಶದಲ್ಲಿ ಕಾಕಿ, ಕಾವಿಗಳ ಕ್ರೌರ್ಯದ ಸ್ಥಾನದಲ್ಲಿ ಮಾನವತೆಯನ್ನೂ ತುಂಬಬೇಕಾಗಿದೆಯೆಂದು ತಿಳಿಸಿದ್ದು ಹೆಚ್ಚು ಸೂಕ್ತವಾಗಿತ್ತು.

ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಬಗ್ಗೆಯಿರುವ ಅದಮ್ಯ ಪ್ರೀತಿಯ ಧ್ಯೋತಕದಂತಿದ್ದ ಕಲಾಮೇಳ ದಲಿತ ವಿಮೋಚನೆ, ಹೋರಾಟಗಳೊಂದಿಗೇನೆ ಸಾಂಸ್ಕೃತಿಕ ಚಳುವಳಿಯ ಮಹತ್ವವನ್ನು ಅಭೂತ ಪೂರ್ವವಾಗಿ ದಾಖಲುಗೊಳಿಸಿತು. ದಲಿತ ಕಲೆಗಳ ಬಗ್ಗೆಯಿದ್ದ ಕೀಳರಿಮೆಯನ್ನೂ ತೊಡೆಯುವಂತಹ ಮುಖ್ಯ ಪ್ರಯತ್ನವಾಗಿ ಯಶಸ್ವಿಯಾಯಿಂತು. ನೂರಾರು ಹಳ್ಳಿಗಳಿಂದ ವಿವಿಧ ವಾದ್ಯಗಳೊಂದಿಗೆ ಆಗಮಿಸಿದ್ದ ಸಾವಿರಾರು ದಲಿತ ಬಾಂಧವರಿಗೆ ಕಲಾಮೇಳ ಸ್ವಾಭಿಮಾನದ ಒಂದು ಹಬ್ಬ. ಸಾರ್ವಜನಿಕರಿಗೆ ಒಂದು ಗಾರುಡಿ ಪ್ರದರ್ಶನ. ರಾಜ್ಯಪ್ರಶಸ್ತಿ ವಿಜೇತ ತುಡಂ ವಂಕಟಪ್ಪ, ತಮಟೆ ಕಲಿಗಳಾದ ಮುನಿವೆಂಕಟಪ್ಪ ಪುರಂ ಎಲ್ಲಪ್ಪ ಮುಂತಾದವರು ನೀಡಿದ ಪ್ರದರ್ಶನ ಅತ್ಯುತ್ತಮ ಮಟ್ಟದ್ದಾಗಿತ್ತು. ಮುನಿಸ್ವಾಮಿ ಮತ್ತು ಪಿಚ್ಚಳ್ಳಿ ಶ್ರೀನಿವಾಸ್‌ರವರ ಹೋರಾಟದ ಹಾಡುಗಳ ಕುಣಿತ ರೋಮಾಂಚಕಾರಿಯಾಗಿತ್ತು,

ಸಾಂಸ್ಕೃತಿಕ ಸಂಘಟನೆಗೆ ಪೂರಕವಾಗುವ ದಲಿತ ಕಲಾಮೇಳದಂದು ಕೊಡಗಿನ ಕೆ. ಬಿ.

ಪ್ಪ ಗೀತಾರವರ ಸರಳ ವಿವಾಹ ನಡೆದದ್ದು ಹೆಚ್ಚು ಸಾಂದರ್ಭಿಕವಾಗಿತ್ತು.

....

---

**"ಎಂಜೇಲಾ! ಅಮೆರಿಕಾ ಉತ್ತರತೀರದಿಂದ ದಕ್ಷಿಣದ ತೀರದವರೆಗೆ ಪ್ರತಿ ಸ್ಥಳದಲ್ಲಿ ನಿನ್ನನ್ನು ಪ್ರೇಮಿಸುವವರಿದ್ದಾರೆ. ಯಾಪಡಬೇಡ! ನಿನ್ನನ್ನು ಬಿಡುಗಡೆಗೊಳಿಸುವವರೆಗೂ ನಿದ್ರಿಸಲಾರೆವು"**

# ಕಪ್ಪು ಚಿರತೆ! ಎಂಜೆಲಾ ಡೇವಿಸ್

ಲೇಖಕ :

**ಬೋಳ ಬಂಡೆಪ್ಪ**

ವಳೊಂದಿಗೆ ಸೇರಿದರು. ಯೂನಿವರ್ಸಿಟಿ
ಯಿಂದ ಡಾಕ್ಟರೇಟ್ ಪದವಿ ತೆಗೆದುಕೊಳ್ಳುವುದ
ಕ್ಕಿಂತ ಮುಂಚೆಯೇ ಅವಳು "ತಿರುಗು ಬೀಳು"
ರ ತನ್ನ ಸಹಚರರಿಗಾಗಿ ರಹಸ್ಯ ಸ್ಥಾವರಗಳ
ನ್ನೇರ್ಪಡಿಸಿ ಆಯುಧಗಳನ್ನು ಕೂಡ ಸಿದ್ಧ
ಪಡಿಸಿಕೊಂಡಳು. 1969ರಿಂದ ಅವಳ ನೇತೃತ್ವ
ದಲ್ಲಿ "ಕೊಲ್ಲಿರಿ ! ಸಾಯಿರಿ !" ಎಂಬ ಘರ್ಜನೆ
ಯೊಂದಿಗೆ ಅವರ ಚಳವಳಿ ಪ್ರಾರಂಭವಾಯಿತು:
'ನಾವೂ ಮನುಷ್ಯರೇ, ರಕ್ತ ಮಾಂಸಗಳು,
ಹೃದಯವೂ, ವ್ಯಕ್ತಿತ್ವವೂ ಇದ್ದ ಜೀವಿಗಳೇ.
ಅವುಗಳನ್ನು ನಿಮ್ಮ ಕರಾಳ ಹಸ್ತಗಳಿಂದ ಹಿಂಸಿ
ಸುವಷ್ಟು ಕಾಲ ಈ ಹೋರಾಟವನ್ನು ನಿಲ್ಲಿಸ
ಲಾರೆವು"ಎಂದು ಪ್ರಕಟಿಸಿದಳು ಎಂಜೇಲಾ.
ಅವರ ಕ್ರೋಧಕ್ಕೆ ಅದೆಷ್ಟೋ ಬಿಳಿಯ ಜಾತಿ
ಯ ಮನೆಗಳು ಅಗ್ನಿಗೆ ಅಹುತಿಯಾದವು.
ಅನೇಕ ಸರಕಾರಿ ಕಾರ್ಯಾಲಯಗಳು ಬಾಂಬು
ಗಳ ಸಿಡಿಲಿನಿಂದ ನೆಲಸಮವಾದವು.

ಅವಳನ್ನು ಹಿಡಿಯಲು ಪೋಲಿಸರು, ಎಫ್.
ಬಿ.ಐ.ಗೂಢಾಚಾರರು ಹಗಲು ರಾತ್ರಿ ಹುಡು
ಕಾಡಿದರು. ಪ್ರಜೆಗಳು, ಪತ್ರಿಕೆಗಳು ಅವಳನ್ನು
"ಕಪ್ಪು ಚಿರತೆ" ಎಂದು ಕರೆಯತೊಡಗಿದರು.

ಈ ಶತಾಬ್ದದಲ್ಲಿ ಆ ಸ ರ ಕಾ ರ ದ ಮೇಲೆ ಒಂಡಾಯ ಹೂಡಿದ ಮೊಟ್ಟಮೊದಲನೆಯ ಮಹಿಳೆಯೆಂದು ಪ್ರಚಾರ ಸಿಕ್ಕಿತು. ಒಂದು ದಿನ ಕೌಲ್ಲ ಪೋರ್ನಿಯಾ ಕೋರ್ಟಿನಲ್ಲಿ ಎಂಜೇಲಳ "ತಿರುಗು ಬೀಳು"ವ ಸಂಘಕ್ಕೆ ಸಂಬಂಧಿಸಿದ ಮೂವ್ವರ ಸದಸ್ಯರ ಮೇಲೆ ವಿಚಾರಣೆ ನಡೆಯುತ್ತಿರುವಾಗ ಜೆಕ್ಸನ್ ಎಂಬ ಹದಿನೇಳು ವರ್ಷದ ಯುವಕನು ಬಂದೂಕಿನಿಂದ ಕೋರ್ಟಿನಲ್ಲಿ ಪ್ರವೇಶಿಸಿ ಗುಂಡಿನ ಸುರಿಮಳೆ ಸುರಿಸಿ ಆ ಮೂವ್ವರನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದನು. ಆಗ ಪೋಲೀಸರೊಂದಿಗೆ ಜರುಗಿದ ಹೋರಾಟದಲ್ಲಿ ಜಡ್ಜರೊಂದಿಗೆ ಇಬ್ಬರು ಆಪಾದಿತರು ಮರಣವನ್ನಪ್ಪಿದರು.

ಆ ಘಟನೆಗೆ ಎಂಜೇಲಳೇ ಕಾರಣಕರ್ತಳೆಂದು ಪೋಲಿಸರು ಪ್ರಕಟಿಸಿದರು. ಆ ಬಂದೂಕಗಳನ್ನು ಅವಳೇ ಸ್ವತಃ ಕೊಂಡುಕೊಂಡಿದ್ದಾಳೆಂದು ನಂಬಿಸಲು ಪುರಾವೆಗಳನ್ನು ಸಹ ಸಂಪಾದಿಸಿದರು. ನಿಜಕ್ಕೂ ಆ ಘಟನೆ ನಡೆದ ದಿನ ಅವಳು ಕೌಲ್ಲಪೋರ್ನಿಯಾದಲ್ಲಿರಲಿಲ್ಲ. ಎಫ್. ಬಿ.ಐ. ರಂಗದಲ್ಲಿಳಿದು ಅವಳ ಪೋಟೋವನ್ನು ಪತ್ರಿಕೆಯಲ್ಲಿ ಹಾಕಿಸಿ ಅವಳನ್ನು ಪತ್ತೆ ಹಚ್ಚಿದವರಿಗೆ ಬಹುಮಾನವನ್ನು ಪ್ರಕಟಿಸಿತು. ಅವಳು ಲಾಸ್ ಎಂಜಿಲ್ಸ್‌ನಲ್ಲಿ ಇದ್ದಾಳೆಂಬ ಸುದ್ದಿ ಕೇಳಿ ಅಲ್ಲಿ ಮನೆಮನೆಯನ್ನು ಶೋಧಿಸಿದರು.ಆದರೂ ಅವಳು ಸಿಗಲಿಲ್ಲ! ದೇಶವೆಲ್ಲಾ ಹುಡುಕಿ, ಹುಡುಕಿ, ಸುಸ್ತಾದ ಪೋಲಿಸರು ಅವಳು ಡೇವಿಡ್ ಆರ್ನಾವ್ ಎಂಬ ಯುವಕನ ಹಿಂದೆ ಕ್ಯೂಬಾಗೋ, ಅಲ್ಜೀರಿಯಾ ಪ್ರದೇಶಕ್ಕೋ ಪರಾರಿಯಾಗಿದ್ದಾಳೆಂದು ಪ್ರ ಕ ಟಿ ಸಿ ದ ರು. ವಿಚಿತ್ರವೇನೆಂದರೆ ಅವಳು ಎಲ್ಲಿಗೂ ಓಡಿ ಹೋಗಿರಲಿಲ್ಲ. ರಿಕಾದಲ್ಲಿಯೇ ಇದ್ದಳು.

ಡೇವಿಡ್‌ನ ತಂದೆ ಕಪ್ಪು ಜಾತಿಯವನು. ತಾಯಿ ಬಿಳಿಯ ಜಾತಿಗೆ ಸೇರಿದ ಶ್ರೀಮಂತಳು. ಡೇವಿಡ್ ಈಗಾಗಲೇ ಎರಡು ಮದುವೆಗಳನ್ನು ಮಾಡಿಕೊಂಡಿದ್ದ. ಒಬ್ಬ ಹೆಂಡತಿ ವಿವಾಹ ವಿಚ್ಛೇದನ ಮಾಡಿಕೊಂಡರೆ, ಮತ್ತೊಬ್ಬಳು ಆತ್ಮಹತ್ಯೆ ಮಾಡಿಕೊಂಡಿದ್ದಳು. ಎಂಜೇಲಳ "ಸೌಂದರ್ಯ"ಕ್ಕೆ ಮುಗ್ಧನಾದ ಡೇವಿಡ್ ಅವಳಿಗೆ ಆಸರೆಯಾಗಿ ನಿಲ್ಲಲು ಸಿದ್ಧನಾದನು.

ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪರಾರಿಯಾಗುವ ಪ್ರಯತ್ನದಲ್ಲಿ ಎಂಜೇಲಳಿಗೆ

(ಮುಂದಿನ ಪುಟಕ್ಕೆ)

# ಸತ್ತ ಮನುಷ್ಯತ್ವವೇ ಮಾತಾಡು

ಒಂದು ರಾತ್ರಿ ಕಳೆಯಿತು. ಒಂದು ಹಗಲು ಕಳೆಯಿತು. ನಾಗೋಜಿಯ ಕಣ್ಣು ನಾಲಿಗೆ ರಕ್ತ ಕಳೆದುಕೊಳ್ಳ ತೊಡಗಿದವು. ಬಸ್ ಸ್ಟಾಂಡ್ ನಿಂದ ಜನರನ್ನು ಸಾಗಿಸುತ್ತಿದ್ದ ಟ್ರಾಕ್ಟರ್‌ನವರನ್ನು ಅಂಗಲಾಚಿದ ; ಇನ್ನೂರು ರೂಪಾಯಿ ಕೊಡುತ್ತೇನೆಂದು ಎರಡು ಮೂಟೆ ಕಡ್ಲೆಕಾಯಿ ಇದೆ. ಅದನ್ನೇ ಮಾರಿ ಕೊಡ್ತೀನಿ ಊರು ಕಾಣಿಸಿಬಿಡಿ ಎಂದು ಗೋಳಾಡಿದ. ನಾಗೋಜಿ ತಮ್ಮ ಸತ್ತು ಬಿದ್ದಿದ್ದ. ಯಾರೂ ಸತ್ತವನ ಕಡೆ ನೋಡಲೇ ಇಲ್ಲ.

ರಾತ್ರಿ ಊಟ ತೀರಿಸಿಕೊಂಡ ಅಲ್ಲಿಯ ದಫೇದಾರ ತಿರುಗಾಡತ್ತ ಹೆಣದತ್ತಿರ ಬಂದು ಎಲ್ಲಾ ವಿಚಾರಿಸಿದ ನಂತರ ಇದು ಕದಂಬಪುರಿಕಣೋ ಹಿಂದೆ ಋಷಿಗಳಿದ್ರು ಇಲ್ಲಿ! ಪುಣ್ಯ ಸ್ಥಳದಲ್ಲೇ ಸತ್ತಿದ್ದಾನೆ. ಬಿಡು; ಇಲ್ಲೇ ಮಣ್ಮಾಡಿಬಿಡು'' ಎಂದು ಅದು ಇದು ಮಾತನಾಡಿ ಹೊರಟ. ನಾಗೋಜಿಯ ಕರುಳು ಕಿವುಚಿ ಬಂತು.

ಎರಡೂ ದಿನದಿಂದ ಹೆಣ ಹಾಕಿಕೊಂಡಿರುವವರು ನಮ್ಮವರೆಂದು ತಿಳಿದ ಕದಬವಹಟ್ಟಿಯ ಕೆಲಜನ ಬಂದು ''ನಮ್ಮವರಿಗೆ ನಾವೇ ಆಗ್ಬಿದ್ರೆಂಗೆ'' ಎಂದು ಹೇಳುತ್ತಾ ಎರಡು ದಿನದಿಂದ ಕೊಳೆಯುತ್ತಿದ್ದ ಹೆಣವನ್ನು ಕಡಬಾದಲ್ಲೇ ಮಣ್ಣುಮಾಡಿದರು.

ಬೆಂಗಳೂರಾಚೆಯ ಒಬ್ಬಳು ಹೆಂಗಸು ಜನಜಾತ್ರೆಯಲ್ಲಿ ಪರದೇಶಿ ಹೆಣವಾಗಿ ಮೂರು ದಿನ ಕೊಳೆತಳು. ಕೊನೆಗೆ ಕೋಲುಗಾರ್ರು, ಪೋಲಿಸರು ಕೋಡಿಹಳ್ಳಕ್ಕೆ ಎಸೆದರು.

ಒಬ್ಬ ಹುಡುಗ ಜಾತೀಯತೆಯ ಕ್ರೂರತನಕ್ಕೆ ಸಾಕ್ಷಿಯಾಗಿ ಕಡಬಾಕೆರೆಯಲ್ಲಿ ಏಡಿ ಮೀನಿಗೆ ಆಹಾರವಾಗಿ ಎರಡು ದಿನ ಬೇವರ್ಸಿ ಹೆಣವಾಗಿ ಅಲೆಗಳೊಂದಿಗೆ ತೇಲಿದ. ಬರುವವರು ನೋಡುತ್ತಲೇ ಬಂದರು. ಹೋಗುವವರು ನೋಡುತ್ತಲೇ ಹೋದರು. ಕೊನೆಗೊಮ್ಮೆ ಪೋಲಿಸರಿಂದಾಗಿ ಮಣ್ಣು.

ಇನ್ನೆರಡು ಹೆಣ್ಣು ಮಕ್ಕಳಿಗೆ ಕದಂಬಪುರಿಯ ಮಣ್ಣು ಸಿಗದೇಹೋದದು ಅವರ ಕರ್ಮಫಲ. ಸಂಬಂಧಿಕರಿಗೆ ದುಃಖದ ಹೊರೆ ಹೊರಿಸಿಕೊಂಡು ತಮ್ಮೂರ ಮಣ್ಣು ಕಾಣಬೇಕಾಯ್ತು.

ಇಲ್ಲಿ ರೋಗದಿಂದ ಸತ್ತ ಐದು ಸಾವುಗಳಿಗೆ ಯಾರು ಹೊಣೆ ? ಬಂದು ಹೋಗುವವರ ನರಳಾಟಕ್ಕೆ ಏನು ಕಾರಣ ?

ಈ ವ್ಯವಸ್ಥೆ ಅಮಾನುಷ ರೀತಿಯ ಸಾವುಗಳನ್ನು ತನ್ನ ಕಾಲಗರ್ಭದೊಳಕ್ಕೆ ಎಳೆದುಕೊಳ್ಳುತ್ತಾ ಮತ್ತೆ ಸಭ್ಯನಂತೆ ನಟಿಸುವುದ ಕಂಡು ಮೈನಡುಗುತ್ತದೆ.

—ನಾಗನೆಂಾ ತುಮಕೂರು

# ಕಪ್ಪು ಚಿರತೆ! ಎಂಜೆಲಾ ಡೇವಿಸ್

(ಮಧ್ಯದ ಪುಟದಿಂದ) .

ಬಾಡಿಗೆ ಕಾರುಗಳನ್ನು ಒದಗಿಸಿಕೊಡುವದೊಂದು ಸಮಸ್ಯೆಯಾಗಿತ್ತು. ಈ ಸಮಸ್ಯೆಯನ್ನು ಪರಿಹರಿಸಲಿಕ್ಕಾಗಿ ಆತನು ಅವಳಿಗಾಗಿ ಹೊಸ ಕಾರೊಂದನ್ನು ಕೊಂಡನು. ಆ ಕಾರು ಡೆಲಿವರಿ ತೆಗೆದುಕೊಂಡ ಸ್ಥಳದಿಂದಲೇ ಪೋಲಿಸರು ಆತನನ್ನು ಬೇಟೆಯಾಡಲು ಪ್ರಾರಂಭಿಸಿದರು.

ಎಂಜೆಲಾ ಆ ಕಾರನ್ನು ಹತ್ತಿ ಆತನೊಂದಿಗೆ ನ್ಯೂಯಾರ್ಕ್ ಸೇರಿಕೊಂಡಳು. ಇಬ್ಬರೂ ಹೆಸರು ಬದಲಿಸಿಕೊಂಡು ಹೋಟೆಲೊಂದರಲ್ಲಿ ತಂಗಿದರು. ಅವಳು ತನ್ನ ಹೆಸರೇ ಅಲ್ಲ, ಎತ್ತರದ ಅಳತೆ ಗಾತ್ರಗಳೊಂದಿಗೆ ರೂಪವನ್ನು ಸಹ ಬದಲಿಸಿಕೊಂಡಳು. ಆದರೆ ಅವರನ್ನು ಹಿಂಬಾಲಿಸಿದ ಇಬ್ಬರು ಪೋಲಿಸ್ ಆಫೀಸರರು ಐದು ದಿನಗಳಿಂದ ಸತತ ಜಾಗೃತದೊಂದಿಗೆ ನಿಘಾಹಾಕಿ ಕೊನೆಗೆ ಅವಳನ್ನು ಗುರ್ತಿಸತೊಡಗಿದರು. ಮರುಕ್ಷಣವೇ ಅವಳನ್ನು ಅರೆಸ್ಟ್ ಮಾಡಿದರು. ''ನನ್ನನ್ನು ನೀವು ಹಿಡಿಯಲಿಲ್ಲ. ನಾನೇ ಈ ರಹಸ್ಯ ಜೀವನದಿಂದ ಬೇಸತ್ತು ಬೇಕೆಂತಲೇ ಸಿಕ್ಕಿಬಿದ್ದಿದ್ದೇನೆ. ಈ ರೀತಿಯಾಗಿ ಇನ್ನು ಮುಂದೆ ಅಮೇರಿಕಾ ಕಾನೂನು ಕಟ್ಟಳೆಗಳೊಂದಿಗೆ ಹೋರಾಡಬೇಕೆಂದುಕೊಂಡಿದ್ದೇನೆ' ಎಂದಳು ಎಂಜೇಲಾ. ಜಾಮೀನು ಮೇಲೆ ಬಿಡುಗಡೆಯಾಗಲು ಅವಳು ನಿರಾಕರಿಸಿದಳು. ಡೇವಿಡ್ ಮಾತ್ರ ಲಕ್ಷ ಡಾಲರುಗಳ ಮುಚ್ಚಳಿಕೆಯಿಂದ ಬಿಡುಗಡೆಯಾದನು.

ಎಂಜೇಲಳಿಗೆ ಕೋಳಗಳನ್ನು ಹಾಕಿ ಕೋರ್ಟಿನಲ್ಲಿ ಹಾಜರು ಪಡಿಸಿದ ದಿನ ಕೋರ್ಟ್ ಹೊರಗೆ ಅಸಂಖ್ಯಾತ ನೀಗ್ರೋ ಜನರು ಕಿಕ್ಕಿರಿದು ಸೇರಿದ್ದರು. ಆ ಗುಂಪಿನಿಂದ ''ಎಂಜೇಲಾ ! ಅಮೇರಿಕಾ ಉತ್ತರತೀರದಿಂದ ದಕ್ಷಿಣದ ತೀರದವರೆಗೆ ಪ್ರತಿ ಸ್ಥಳದಲ್ಲಿ ನಿನ್ನನ್ನು ಪ್ರೇಮಿಸುವವರಿದ್ದಾರೆ. ಭಯಪಡಬೇಡ! ನಿನ್ನನ್ನು
ಬಿಡುಗಡೆಗೊಳಿಸುವವರೆಗೂ ನಿದ್ರಿಸ
ಎಂದು ಯುವಕನೊಬ್ಬನು ಕೂಗಿದ
ನಿನಾದಕ್ಕೆ ಅವಳು ನಕ್ಕಳು. ಜನರೆಲ್ಲಾ
ನ್ನೆತ್ತಿ. ಮುಷ್ಠಿ ಬಿಗಿಹಿಡಿದು ಅವಳ
ಆಕಾಶವು ಸೀಳುವಂತೆ ನಿನಾದಗೈದರು.
ರಿಕಾ ಸರಕಾರವು ಅವಳನ್ನು ಕೋರ್ಟಿಗ
ಲಿಲ್ಲ. ನ್ಯಾಯ ವಿಚಾರಣೆ ನಡೆಸದೆ
ಭದ್ರತಾ ಕಾನೂನಿನಂತಹ ಕಾನೂನು
ನಿರ್ಭಂಧಿಸಿತು. 'ನನ್ನನ್ನು ಜೀವಿತಾ
ಜೈಲಿನಲ್ಲಿಟ್ಟರೂ, ನೇಣು ಹಾಕಿದರೂ
ಭಯವಿಲ್ಲ ನಾನು ಹೊತ್ತಿಸಿದ ಬೆಂಕಿ
ನಮ್ಮ ಜನಾಂಗಕ್ಕೆ ಸಮಾನ ಹಕ್ಕುಗಳು,
ವೂ ಲಭಿಸುವವರೆಗೂ ದೈತ್ಯಾಕಾರದ
ಯಾಗಿ ಉರಿಯುತ್ತಲೇ ಇರುತ್ತದೆ'
ಘರ್ಜಿಸಿದಳು ಎಂಜೇಲಾ. [ಸೌಜನ್ಯ :

# ಈರ ಲಿಂಗಾ ಹಸ್ಲರ
## ದುರಂತ ಕಥೆ

- ಉತ್ತರ ಕನ್ನಡ ಜಿಲ್ಲೆ, ಸಿದ್ದಾಪುರ
ಕಿನ ದನವಾವು ಹರಿಜನ ಈರಾ ಲಿಂಗಾ
ರನ ಭೂಮಿ ಮನೆ ಕಸಿದುಕೊಂಡ ದುರ
ಇಲ್ಲಿದೆ.

ಈರಾ ಲಿಂಗಾ ಹಸ್ಲರ್ ಕಳೆದ ನಾಲು
ಗಳಿಂದ ಸರ್ಕಾರಿ ಭೂಮಿ ದನವಾವು ಗ
ಸರ್ವೆ ನಂ.220 ಮತ್ತು 221ರಲ್ಲಿನ
24 ಗುಂಟೆ ಭೂಮಿಯಲ್ಲಿ ಮನೆಕಟ್ಟಿ
ವಾಸವಾಗಿರುತ್ತಾನೆ. ಅದೇ ಊರಿನ ಜ
ದಾರನಾದ ಗಣಪತಿ ಹೆಗ್ಗಡೆ ಕಣ್ಣು
ಭೂಮಿಯ ಮೇಲೆ ಬಿದ್ದು, ತನ್ನ
ಪ್ರಭಾವದಿಂದ ಗ್ರಾಮ ಲೆಕ್ಕಿಗ, ಸರ್ಕಲ
ಸ್ಪೆಕ್ಟರ್ ಮತ್ತು ತಹಶೀಲ್ದಾರರ
ಸುಳ್ಳು ವರದಿ ಪಡೆದು ಈರಾ ಲಿಂಗಾ
ಭೂಮಿಯನ್ನು ಜಿಲ್ಲಾಧಿಕಾರಿಗಳಿಂದ
27-1-82ರಂದು ಮಂಜೂರಿ ಪಡೆದಿರ

ಪ್ರಕರಣದಲ್ಲಿ ಈರಾ ಲಿಂಗಾ ಹ
ಆಗಿರುವ ಹಾನಿ, ಅನ್ಯಾಯ ಸರಿ
ಜಿಲ್ಲಾಧಿಕಾರಿಗಳ ಮಂಜೂರಿ ಆಜ್ಞೆ
ರದ್ದು ಪಡಿಸುವಂತೆ ವಿಭಾಗಾಧಿಕಾರಿ ಬ
ಇವರಲ್ಲಿ ಒತ್ತಾಯ ಪಡಿಸುತ್ತಾ, ಪ್ರಕ
ತಪ್ಪಿತಸ್ಥರಾದ ಗ್ರಾಮಲೆಕ್ಕಿಗ, ಸರ್ಕಲ
ಸ್ಪೆಕ್ಟರ್, ತಹಶೀಲ್ದಾರರನ್ನು ಕೂ
ಸಸ್ಪೆಂಡ್ ಮಾಡುವುದರ ಮೂಲಕ
ಮುಂದಾದರೂ ಇಂಥ ತಪ್ಪುಗಳು
ನಿಲ್ಲಬಹುದು. ಈ ಅಕೃತ್ಯವನ್ನು
ಸಂಘರ್ಷ ಸಮಿತಿ ಖಂಡಿಸಿದೆ.

—ನಾರಾಯಣ

# ಜಾತಿವ್ಯವಸ್ಥೆ ಮುರಿಯಲು "ಭೀಮಸೇನೆ"

**ದಲಿತರ ವಿಮೋಚನೆಗಾಗಿ ನೆರೆಯ ರಾಜ್ಯವಾದ ಮಹಾರಾಷ್ಟ್ರದಲ್ಲಿ ನಡೆದ ಹೋರಾಟಗಳು ಹಲವು. ಅವುಗಳಲ್ಲಿ ದಿ.ಶಾಮಸುಂದರ್ ಅವರು ಸಂಘಟಿಸಿದ್ದ "ಭೀಮಸೇನೆ" ಕೂಡ ಒಂದು. ಇಡೀ ದಲಿತ ಜನಾಂಗವನ್ನು ಶೋಷಣಾ ಮುಕ್ತರನ್ನಾಗಿಸಲು ಹೊರಟಾಗ ಈ ಚಳವಳಿ ಅವರ ಸಾವಿನೊಂದಿಗೆ ಅವಸಾನ ಕಂಡಿತು. "ಭೀಮಸೇನೆ"ಯ ಕ್ರಿಯಾಶೀಲ ಕಾರ್ಯಕರ್ತರಲ್ಲೊಬ್ಬರಾದ ಶ್ರೀ ರಾಜಾರಾಮಗಾಜರೆ ಅವರೊಂದಿಗೆ ಕಲ್ಬುರ್ಗಿಯ ದ.ಸಂ.ಸ. ಗೆಳೆಯರು ನಡೆಸಿದ ಮಾತುಕತೆ ಇಲ್ಲಿದೆ.**

ದ.ಸಂ.ಸ. : "ಭೀಮಸೇನೆ"ಯ ಚಳವಳಿಯು ಪ್ರಾರಂಭವಾದದ್ದೇಕೆ ? ಮತ್ತು ಅದರ ಉದ್ದೇಶಗಳೇನು ?

ಭೀ.ಸೇನೆ : ಸಮಾಜವು ಜಾತಿಗಳ ಆಧಾರದ ಮೇಲೆ ರಚಿಸಲ್ಪಟ್ಟಿದ್ದು, ಹಿಂದುಗಳು ಕೆಲವು ಜನರನ್ನು ಅಸ್ಪೃಶ್ಯರೆಂದು ಕರೆದು ಅವರ ಮೇಲೆ ಅಮಾನವೀಯ ದೌರ್ಜನ್ಯಗಳನ್ನೆಸಗುತ್ತಿದ್ದರು. ಅಸ್ಪೃಶ್ಯತೆಯನ್ನು ನಾಶಮಾಡಿ ಜಾತಿ ವ್ಯವಸ್ಥೆಯನ್ನು ಮುರಿದು ಸಾಮಾಜಿಕ–ಸಮಾನತೆಯನ್ನು ತರಲು ಆಗ ಒಂದು ಚಳವಳಿಯ ಆವಶ್ಯಕತೆ ಇತ್ತು. ಅದಕ್ಕೆ "ಭೀಮ ಸೇನ" ಎಂಬ ಚಳವಳಿಯನ್ನು ದಿ.ಶಾಮಸುಂದರ್ ಸಾಹೇಬರ ನೇತೃತ್ವದಲ್ಲಿ 1968ರಲ್ಲಿ ಪ್ರಾರಂಭಿಸಲಾಯಿತು.

ದ.ಸಂ.ಸ. : 'ಭೀಮ ಸೇನೆ'ಗೆ ಎಲ್ಲಾ ಜಾತಿಯವರನ್ನು ಸೇರಿಸಿಕೊಳ್ಳಲಾಗುತ್ತಿತ್ತೆ ?

ಭೀ.ಸೇನೆ : ಭೀಮ ಸೇನೆಯ ಪರತತ್ವಗಳಿಗೆ ಒಪ್ಪಿ ಸೇನೆಗೆ ಚ್ಯುತಿ ಬಾರದ ರೀತಿಯಲ್ಲಿ ನಡೆದುಕೊಳ್ಳುವ ಯಾವ ಜಾತಿಯವರಿಗಾದರೂ ಸದಸ್ಯತ್ವ ಕೊಡಲಾಗುತ್ತಿತ್ತು. ಆದರೆ ಭೀಮಸೇನೆಯು ಅಸ್ಪೃಶ್ಯರ ಜೀವಾಳವಾಗಿದ್ದರಿಂದ ಅಸ್ಪೃಶ್ಯರ ನೇತೃತ್ವದಲ್ಲಿಯೇ ಈ ಚಳವಳಿ ನಡೆಯುತ್ತಿತ್ತು.

ದ.ಸಂ.ಸ. : 'ಭೀಮ ಸೇನೆ'ಯ ಅಂಗ ಸಮಿತಿಗಳೇನಾದರೂ ಇದ್ದವೆ ?

ಭೀ.ಸೇನೆ : ಹೌದು. ಜಿಲ್ಲಾಮಟ್ಟದಲ್ಲಿ ಗುಪ್ತಾವಳಿ ಎಂಬ ಒಂದು ಭೀಮಸೇನೆಯ ಅಂಗವಿದ್ದು, ಅದು ಚಳವಳಿಯ ರೂಪರೇಷೆಗಳನ್ನು ಮತ್ತು ಸಿದ್ಧಾಂತಗಳನ್ನು ಹೇಳಿಕೊಡುತ್ತಿತ್ತು. ಈ ಇಂಟಲಿಜನ್ಸ್ ಸರ್ವಿಸಗೆ ಚಳವಳಿಯ 'ಪ್ರಾಣ' ಎಂದು ಮಾನ್ಯತೆ ಕೊಡಲಾಗುತ್ತಿತ್ತು. ಇದರೊಂದಿಗೆ ಕಾನೂನು ಸಲಹಾ ಮಂಡಳಿ ಎಂಬ ಅಂಗವಿದ್ದು, ಅದು ಚಳವಳಿಗೆ ಕಾನೂನಿನ ಸಲಹೆ ಕೊಡುತ್ತಿತ್ತು. ದರೋಡೆ, ದಂಗೆ, ಧರಣಿ ಮತ್ತು ಚುನಾವಣೆಗಳಂತಹ ಸಂದರ್ಭದಲ್ಲಿ ಆಗುವ ಗಲಭೆಗಳಿಗೆ ಅಸ್ಪೃಶ್ಯರನ್ನು ಬಲಿಪಶುಗಳನ್ನಾಗಿ ಮಾಡುವುದನ್ನು ತಪ್ಪಿಸಲು ಈ ಕಾನೂನು ಸಲಹಾ ಮಂಡಳಿ ಕೆಲಸ ಮಾಡುತ್ತಿತ್ತು.

ದ.ಸಂ.ಸ. : 'ಭೀಮ ಸೇನೆ'ಯ ಮೂಲಕ ನೀವು ಯಾವ ಯಾವ ಕೆಲಸಗಳನ್ನು ಮಾಡುತ್ತಿದ್ದಿರಿ ?

ಭೀ.ಸೇನೆ : ಹಳ್ಳಿಗಳಲ್ಲಿ ಜಾತ್ಯಂಧ ಹಿಂದುಗಳು ಅಸ್ಪೃಶ್ಯರಿಗೆ ಆರ್ಥಿಕ ನಿರ್ಬಂಧನೆಗಳನ್ನು ಹಾಕಿದಾಗ ಭೀಮ ಸೇನೆಯು ಅಲ್ಲಿಗೆ ಧಾವಿಸಿ ಅವರ ಸಮಸ್ಯೆಗಳನ್ನು ಪರಿಹರಿಸಿ ನ್ಯಾಯವನ್ನು ದೊರಕಿಸಿ ಕೊಡುತ್ತಿತ್ತು. ಜತೆಗೆ ಕೃಷಿಕೂಲಿಗಾರರ, ಕಾರ್ಮಿಕರ, ಕಲಾಕಾರರ, ವ್ಯಾಪಾರಿಗಳ ಮತ್ತು ಮುನ್ಸಿಪಾಲಿಟಿ ಕೆಲಸಗಾರರನ್ನು ಸಂಘಟಿಸಿ ಟ್ರೇಡ್ ಯೂನಿಯನ್ ತರಹದ ಸಂಘಗಳನ್ನು ಕಟ್ಟಿ, ಅದರ ಮುಖ್ಯ ಅಧಿಕಾರವನ್ನು ಭೀಮಸೇನೆಗೆ ವಹಿಸಿಕೊಟ್ಟು ಶ್ರಮಿಕ ವರ್ಗಕ್ಕೆ ಅನ್ಯಾಯವಾದಾಗ ಚಳವಳಿಯ ಮೂಲಕ ಹೋರಾಟ ಮಾಡಲಾಗುತ್ತಿತ್ತು.

ಜೈಲುವಾಸಿಗಳಲ್ಲಿ ಸಾಮಾನ್ಯವಾಗಿ ಕಕ್ಕಸು ಬಳಿಯುವ ಕೆಲಸ ಅಸ್ಪೃಶ್ಯರಿಗೇನೇ ಕೊಡಲಾಗುತ್ತಿತ್ತು. ಈ ಪದ್ಧತಿಯನ್ನು ನಿರ್ಮೂಲನ ಮಾಡಲು ಮೆರವಣಿಗೆ ಹಾಗೂ ಕೇಂದ್ರ ಜೈಲು ಕಛೇರಿಗಳ ಎದುರಿಗೆ ಧರಣಿ ಸತ್ಯಾಗ್ರಹವನ್ನು ಭೀಮ ಸೇನೆಯಿಂದ ಕೈಗೊಂಡು ಸಂಪೂರ್ಣವಾಗಿ ಈ ಪದ್ಧತಿಯನ್ನು ನಿರ್ಮೂಲನಮಾಡಿಸಲಾಯಿತು.

ಅಸ್ಪೃಶ್ಯರ ಕೇರಿಗಳಲ್ಲಿ ರಾತ್ರಿ ಶಾಲೆಗಳನ್ನು ತೆರದು ಅನಕ್ಷರಸ್ಥರಿಗೆ ವಿದ್ಯೆಯನ್ನು ಕಲಿಸುವುದನ್ನು ಮತ್ತು ಜನಗಣತಿ ಸಂದರ್ಭದಲ್ಲಿ, ಗಣತಿಕಾರರ ಜೊತೆಗೆ ಹೋಗಿ ಅಸ್ಪೃಶ್ಯರ ಹೆಸರುಗಳನ್ನು ಸರಿಯಾಗಿ ನೊಂದಣಿ ಮಾಡಿಸುವ ಕಾರ್ಯಕ್ರಮವನ್ನು ಮಾಡಲಾಗುತ್ತಿತ್ತು. ಚುನಾವಣೆ ಸಂದರ್ಭದಲ್ಲಿ ಅಸ್ಪೃಶ್ಯರನ್ನು ದೈಹಿಕವಾಗಿ ತಡೆಹಿಡಿದು ಮತ ಚಲಾಯಿಸುವ ಹಕ್ಕನ್ನು ವಂಚಿಸಲಾಗುತ್ತಿತ್ತು. ಇಂತಹ ಸಂದರ್ಭಗಳಲ್ಲಿ ಭೀಮಸೇನೆಯು ಹೋರಾಟ ಮಾಡಿ ಮತ ಚಲಾಯಿಸಲನುವುಮಾಡಿ ಕೊಡುತ್ತಿತ್ತು.

## ಮಾತುಕತೆ

ದ.ಸಂ.ಸ. : ಭಾರತ ದೇಶದಲ್ಲಿ ಹಿಂದುಗಳ ವಿರುದ್ಧ ಬಂಡೆದ್ದ ಈ ಚಳವಳಿಯು ಪ್ರತ್ಯೇಕ ರಾಷ್ಟ್ರದ ಬೇಡಿಕೆಯ ನಿಲುವನ್ನೇನಾದರೂ ತಳೆದಿತ್ತೆ ?

ಭೀ.ಸೇನೆ : ಇಲ್ಲಾ. ಆದರೆ ಅಸ್ಪೃಶ್ಯರ ಸಲುವಾಗಿ ಪ್ರತ್ಯೇಕ ವಿಶ್ವವಿದ್ಯಾಲಯ ಮತ್ತು ಪ್ರತ್ಯೇಕ ರಾಜಕೀಯ ಪಕ್ಷವನ್ನು ಪಡೆಯುವ ನಿರ್ಧಾರಗಳನ್ನು ಭೀಮ ಸೇನೆಯ ಸಮ್ಮೇಳನಗಳಲ್ಲಿ ತೆಗೆದುಕೊಳ್ಳಲಾಗಿತ್ತು.

ದ.ಸಂ.ಸ. : "ಭೀಮ ಸೇನೆ" ಚಳವಳಿಗೆ ರಾಜಕೀಯ ಪಕ್ಷಕಟ್ಟುವ ಉದ್ದೇಶವಿತ್ತೆ ?

ಭೀ.ಸೇನೆ : ಹೌದು. ಸಾಮಾಜಿಕ ಚಳವಳಿಯ ಮೂಲಕ ಅಸ್ಪೃಶ್ಯರಲ್ಲಿ ಜಾಗೃತಿ ಮೂಡಿಸಿ ಹಿಂದುಗಳೇತರ ಪ್ರತ್ಯೇಕ ರಾಜಕೀಯ ಪಕ್ಷವನ್ನು ಕಟ್ಟಿ ಅಧಿಕಾರವನ್ನು ಹಿಡಿದುಕೊಂಡು ಜಾತ್ಯಾತೀತ ಸಮಾಜ ಮತ್ತು ಸಮತಾ ರಾಜ್ಯ

(14ನೇ ಪುಟಕ್ಕೆ)

ಸಿದ್ರಾಮಪ್ಪ

## ಕೆರ ಮುಟ್ಟಿದರೆ 'ಕೆರದಂಡ': ಕೆರಹೊಲೆವವರ ಸ್ವಾಭಿಮಾನ ಚಳವಳಿ

ಅಸ್ಪೃಶ್ಯರ ಬಾಳನ್ನ ವಿಕೃತಗೊಳಿಸುವುದು ಸವರ್ಣೀಯ ಸಂಸ್ಕೃತಿಯ ಒಂದುಸಂಪ್ರದಾಯ. ಕೆರ ಹೊಲಿಯುವವರನ್ನು ಹೀನವಾಗಿ ಕಾಣುವುದೊಂದು ಸವರ್ಣೀಯರ ಸಂಸ್ಕೃತಿ ಸಹ. ಈ ರೀತಿಯ ಬ್ರಾಹ್ಮಣ ಸಂಸ್ಕೃತಿಗೆ ಕೆರೆ ಹೊಲಿಯುವ ಜನ ಸವಾಲ್ ಹಾಕಿದ್ದಾರೆ. ಕೋಲಾರದ ಬಸ್‌ನಿಲ್ದಾಣದ ಬಳಿ ಬಿಸಿಲಿಗೆ ಬೆನ್ನು ಕೊಟ್ಟು, ತಮ್ಮ ಕುಲ ಕಸುಬೆಂದುಕೊಂಡು ಜೀವನವನ್ನೇ ದುರಂತದಲ್ಲಿ ನಿಲ್ಲಿಸಿ ಕೊಂಡಿರುವ ದಲಿತರ ಸವಾಲು !

ಕಿತ್ತ ಕೆರ ತಂದವರು ಇವರನ್ನು ಬಳಸಿಗೊಳ್ಳುವ ರೀತಿ ನೋಡಿದರೆ ಹೇಸಿಗೆ ತರುವಂತಹದಾಗಿದೆ. ಕೆರ ಹೊಲಿದು ಕೊಟ್ಟರೆ ಅದಕ್ಕೆ ಸಮಂಜಸ ಕೂಲಿ ಕೊಲಿಕೊಡುವುದಿಲ್ಲ. ಈಗಾಗಿ ಬಹಳಷ್ಟು ನೋವಿನಲ್ಲಿದ್ದ ಇವರು ಇದೀಗ ಸ್ಫೋಟಗೊಂಡಿದ್ದಾರೆ. ಅಷ್ಟೇ ಆಕ್ರೋಶವನ್ನು ಹಿಡಿತದಲ್ಲಿಟ್ಟುಕೊಂಡು ಸ್ವಾಭಿಮಾನ ಕಾಪಾಡಿಕೊಳ್ಳುತ್ತಿದ್ದಾರೆ. ಇದಕ್ಕೆ ಪ್ರಯತ್ನಿಸಿದ ಈ ಜನತೆಯ ಮಕ್ಕಳು ದ.ಸಂ.ಸ.ಯ ಕಾರ್ಯಕರ್ತರು

ಇದೀಗ ಇವರದೆ ಆ ೨ ಶಾಸನಗಳು ರಚನೆ ಮಾಡಿಕೊಂಡಿದ್ದಾರೆ. ೧) ಯಾರೆ ಕಿತ್ತಕೆರ ಒಂದು ಮುಂದಿಟ್ಟರೆ, ಅದನ್ನು ಮುಟ್ಟಿ, ಹೊಲಿದರೆ ಹಾಗುವ ವೆಚ್ಚವನ್ನು ತಿಳಿಸಲಾಗುವುದು. ಅದಕ್ಕೆ ಒಪ್ಪದಿದ್ದರೆ ಮುಟ್ಟಿದಕ್ಕೆ ೫೦ ಪೈಸೆ ದಂಡ ತೆರಬೇಕು.

೨) ೫೦ಪೈಸೆ ಕೊಟ್ಟು ವಾಪಾಸ್ ಪಡೆದ ಚಪ್ಪಲಿಯ ಮಾಲಿಕ, ಬೇರೊಂದು ಅಂಗಡಿಗೆ ಧಾವಿಸಿದರೆ, ಮೊದಲ ಅಂಗಡಿಯವ ತಿಳಿಸಿದ ದರ ತೆರಬೇಕು. ಇಲ್ಲ ಆತ ಮುಟ್ಟಿದಕ್ಕೂ ೫೦ಪೈಸೆ ತೆರಬೇಕು. ಅಷ್ಟೇ ಅಲ್ಲದೆ ಬಡವನಾದ ವ್ಯಕ್ತಿಗೆ ರಿಯಾಯಿತಿ ದರದಲ್ಲಿ ಸಹಾಯಕರಾಗುತ್ತಾರೆ. ಜಾತಿ–ಭೇದ, ಮತ, ಕುಲ ಬೇಕಿಲ್ಲ ಇವರಿಗೆ. ಸ್ವಾಭಿಮಾನ ಮನುಷ್ಯತ್ವ ಎಚ್ಚೆತ್ತಿದೆ.

ಇವರದೇ ಆದ ಒಂದು ಕರೆ ಎಂದರೆ "ಎಲ್ಲೇ, ನಮ್ಮ ಜನತೆ ತಮ್ಮ ನೋವನ್ನು ಸವಾಲ್‌ಆಗಿ ಮಾಡಿಕೊಂಡು, ನಾವು ಮನುಷ್ಯರು ಎಂಬುದನ್ನು ತೋರಿಸಲು ಸಂಘಟಿತರಾಗಬೇಕು.'

—ನಾರಾಯಣ ಸ್ವಾಮಿ

## ಸೈಟುಗಳನ್ನು ನುಂಗುವ ಶಾಸಕ

ಕೆ. ಜಿ. ಎಫ್ ಉರುಗಾಂ ಪೇಟೆ, ಆದ್ರಂ ಲೈನ್‌ನಲ್ಲಿರುವ ಸರ್ವೆ ನಂ 130, 131 ಮತ್ತು 132 ರ ಜಮೀನು 1976 ರಲ್ಲಿ ಸರ್ಕಾರದ ವಶದಲ್ಲಿದ್ದು, ಇಲ್ಲಿ ವಾಸವಾಗಿರುವ ಮನೆಯಿಲ್ಲದ ನಿವಾಸಿಗಳಿಗೆ ಹಂಚುವುದಾಗಿ ಹೇಳಲಾಗಿತ್ತು. ಇದರ ಬಗ್ಗೆ ಮನೆಯಿಲ್ಲದ ದಲಿತರು ಸರ್ಕಾರಕ್ಕೆ ಮನವಿ ಕೊಟ್ಟು ಕಾದರು, ಆದರೆ ಇಲ್ಲಿನ ಶಾಸಕನ ಕೈ ಚಳಕದಿಂದಾಗಿ, ಮನೆ ಇರುವಂತಹ ಜನತೆಗೆ ಹಕ್ಕು ಪತ್ರ ಕೊಡಲು ಮುಂದಾಗಿದ್ದಾನೆ. ಸರ್ಕಾರವು 97 ಹಕ್ಕು ಪತ್ರ ನೀಡಲು 8/5/82 ರಂದು ಬಂದಾಗ, ಆ ಪಟ್ಟಿಯಲ್ಲಿ ಅಲ್ಲಿಯೇ ವಾಸಿಸುತ್ತಿರುವವರ ಹೆಸರಿಲ್ಲದನ್ನು ಕಂಡು ಭೀತಿ ಪಟ್ಟ ಅಂದ್ರಲೈನ್‌ನವರು ಅಕ್ರಮವಾಗಿ ಹಂಚುತ್ತಿರುವ ನಿವೇಶನದ ಹಕ್ಕು ಪತ್ರಗಳನ್ನು ನಿಲ್ಲಿಸಬೇಕೆಂದೂ ಇಲ್ಲಿ ಮನೆಯಿಲ್ಲದೆ ಬೀದಿಯಲ್ಲಿ ಬಿದ್ದಿರುವ ಬಡವರಿಗೆ ಹಂಚಬೇಕೆಂದೂ ಕೇಳಿದಾಗ, "ನನ್ನ ಮಕ್ಕಳು ಕೇಳುತ್ತಿರುವುದನ್ನು ಮಾಡಬೇಕು" ಎಂದು ವ್ಯಂಗದ ನುಡಿಆಡಿ ಹೋದ ಶಾಸಕ ಇನ್ನೂ ಸ್ಥಳಕ್ಕೆ ಬಂದಿಲ್ಲ,

ಈಗಾಗಲೇ ಈ ಜಮೀನಿನಲ್ಲಿ 10 ಮನೆಗಳಿದ್ದಾವೆ, ದ. ಸಂ. ಸ. ಸ್ಥಳೀಯ ಶಾಖೆ ಸರ್ಕಾರಕ್ಕೆ ಮನವಿ ಮಾಡಿಕೊಂಡು, ಇವರೊಂದಿಗೆ ಉಳಿದ ಇಲ್ಲಿನ ಜನರಿಗೆ ಹಂಚಬೇಕೆಂದು ಒತ್ತಾಯಿಸಿದ್ದಾರೆ. ನಿರ್ಲಕ್ಷ ಮಾಡಿ ಅಕ್ರಮವಾಗಿ ಹಂಚಿಕೆ ಮಾಡುವುದಾದರೆ ತೀವ್ರ ತರ ಹೊರಟ ಮಾಡುವುದಾಗಿ ಸಂಚಾಲಕ ವಿ. ರಾಮಚಂದ್ರ ತಿಳಿಸಿದ್ದಾರೆ. ....

## ದಫೇದಾರ್ ಗುರುಮೂರ್ತಿಯ 'ಬೆತ್ತಲೆ' ದರ್ಪ

ಚಾಮರಾಜನಗರದ ಪೊಲೀಸ್ ದಫೇದಾರ್ ಗುರುಮೂರ್ತಿ ಎಂಬ ಸವರ್ಣೀಯ ನಿರಪರಾಧಿ ದಲಿತ ಬಾಲಕರನ್ನು ಸಾರ್ವಜನಿಕವಾಗಿ ಅರೆಬೆತ್ತಲು ನಿಲ್ಲಿಸುವುದರಲ್ಲೂ ಮಜ ಪಡೆಯುವಂಥ ವ್ಯಕ್ತಿ. ಮೂಡಿಗೆರೆಯ ಪರೀಘನಿಗೂ, ಈ ಗುರುಮೂರ್ತಿಗೂ ರಾಜ್ಯ ಪೋಲೀಸ್ ಇಲಾಖೆ ಪ್ರಶಸ್ತಿ ಕೊಡಬಹುದು.

ನಾಗರಾಜು ಎಂಬ ದಲಿತ ಗೆಳೆಯನ ಮೇಲೆ 'ಹುಡುಗಿಗೆ ಡಿಕ್ಕಿ ಹೊಡೆದ'—ಎಂಬ ಆರೋಪ ಹೊರಿಸಿ, ಎಲ್ಲಾ ಬಟ್ಟೆ ಬಿಚ್ಚಿಸಿ(ನಿಕ್ಕರ್ ಬಿಟ್ಟು) ರಸ್ತೆ ಬಳಿ ಕೈಗೆ "ನಾನು ಹುಡುಗಿಯನ್ನು ಚುಡಾಯಿಸುವವನು" ಎಂದು ಬರೆಯಲಾದ ಸ್ಲೇಟನ್ನು ಕೊಟ್ಟು ನಿಲ್ಲಿಸಿದ್ದ.

ಹಗಲಿನ ಅವಮಾನ, ರಾತ್ರಿಯ ಪೋಲೀಸ್ ಲಾಠಿ ಏಟಿನಿಂದ ತತ್ತರಿಸಿದ ದಲಿತ ನಾಗರಾಜನ ಮುಖ ಕಂಡು ನೋವಿನಿಂದ ಮತ್ತು ರೋಷದಿಂದ ಆತನ ಗೆಳೆಯರು ಕೇಳಿದ್ದಾರೆ—"ಈ ಗುರುಮೂರ್ತಿಯ ಕೈಗೆ ಯಾವ ಪದಗಳನ್ನು ಬರೆದ ಸ್ಲೇಟ್ ಕೊಟ್ಟು, ಯಾವ ಅವಸ್ಥೆಯಲ್ಲಿ, ಯಾವ ಬಹಿರಂಗ ರಸ್ತೆಯಲ್ಲಿ ನಿಲ್ಲಿಸಬೇಕು ?"

## ದಲಿತ ಹೆಣ್ಣು ಮಗಳ ಮೇಲೆ ಅತ್ಯಾಚಾರ

ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ ನಾಗಮಂಗಲ ಗ್ರಾಮದಲ್ಲಿ ದನ ಹೊಡೆದು ತರಲು ಹೋಗಿದ್ದ ದಲಿತ ಹೆಣ್ಣುಮಗಳು ಮುನಿಅಕ್ಕಯ್ಯಮನ ಮೇಲೆ ಸವರ್ಣೀಯರು ನಡೆಸಿದ ಅತ್ಯಾಚಾರವನ್ನು ಮೇ-26 ರಂದು ದಲಿತ ಸಂಘರ್ಷ ಸಮಿತಿಯ ದೇವನಹಳ್ಳಿ ಶಾಖೆ ಪ್ರತಿಭಟಿಸಿತು.

ಕೊಬ್ಬಿದ ಭೂ ಮಾಲಿಕರ ಕುಮ್ಮಕ್ಕು ಗಳಿಸಿದ್ದ ಸವರ್ಣೀಯನಾದ ರಾಜ ಎಂಬುವನು ಹಾಡಹಗಲಿನಲ್ಲೇ ದಲಿತ ಮುನಿದಾಸಪ್ಪನ ಮಗಳಾದ ಮುನಿಅಕ್ಕಯ್ಯಮ್ಮನ ಮೇಲೆ ಅತ್ಯಾಚಾರ ನಡೆಸಿದ್ದ.

ಅಂದು ನಡೆದ ಭಾರೀ ಮೆರವಣಿಗೆಯಲ್ಲಿ 'ದಲಿತರ ಮೇಲಿನ ಅತ್ಯಾಚಾರಕ್ಕೆ ಧಿಕ್ಕಾ ಮೊದಲಾದ ಘೋಷಣೆಗಳು ಮುಗಿಲು ಮುಟ್ಟಿದವು. ದಲಿತ ಕಲಾ ಮಂಡಳಿಯ ನಾಟಕ ನೋವುಂಡ ಜನಗಳಲ್ಲಿ ಹೋರಾಟದ ಕಿಚ್ಚನ್ನು ಹೊತ್ತಿಸಿತು. ....

## ದಲಿತ ಪ್ರೇಮಿಗಳ ಅಂಬೇಡ್ಕರ್ ಜನ್ಮೋತ್ಸವ !

ಈ ಬಾರಿ ಹಂಪಾಪುರದಲ್ಲಿ ದಿ-10-5-82 ರಂದು ದಲಿತ ಪ್ರೇಮಿಗಳಾದ ಸಿದ್ಧರಾಜಮ್ಮ ಮತ್ತು ಪುಟ್ಟಯ್ಯ ಅವರುಗಳು ಸರಳ ಮದುವೆಯಾಗುವುದರ ಮೂಲಕ ಡಾ॥ ಅಂಬೇಡ್ಕರ್ ಜನ್ಮದಿನೋತ್ಸವಕ್ಕೆ ಹೊಸ ಮೆರುಗು ಕೊಟ್ಟರು.

ಸಂಜೆ ನಡೆದ ಕಾರ್ಯಕ್ರಮದಲ್ಲಿ ವರದಯ್ಯ, ರುದ್ರಸ್ವಾಮಿ, ಶಿವಮಲ್ಲು ದೇವ ಊರ ಮೊದಲಾದವರು ಭಾಗವಹಿಸಿದ್ದರು. ....

# ಕೊಡಗಿನ ಕತ್ತಲೆಯಲ್ಲಿ ಆತ್ಮಹತ್ಯೆ ಎಂಬ ಕೊಲೆ

(ಮೊದಲ ಪುಟದಿಂದ)

ರೂಪಾಯಿ ಸಾಲ ಮಾಡಿದ್ದಕ್ಕಾಗಿ ಕಳೆದ ಎರಡು-ಮೂರು ವರ್ಷದಿಂದ ಜಾಫರ್‌ಸಾಬ್‌ರ ಮನೆಯಲ್ಲಿ ಜೀತದಾಳಾಗಿದ್ದ.

ಮೇ 17ನೇ ತಾರೀಖು. 7 ಮೈಲು ದೂರವಿರುವ ಶನಿವಾರ ಸಂತೆಯಿಂದ ಪೆಟ್ರೋಲ್ ತರಲು ಮಾಲಿಕ ಜಾಫರ್ ಪುಟ್ಟಸ್ವಾಮಿಗೆ ಹೇಳಿದಾಗ ಪುಟ್ಟಸ್ವಾಮಿ ಸೈಕಲ್ ತೆಗೆದುಕೊಂಡು ಪೆಟ್ರೋಲ್ ತಂದ. ದಾರಿಯಲ್ಲಿ ಬರುವಾಗ ತನ್ನ ಮನೆಗೂ ಹೋಗಿ ತಂದೆ, ತಾಯಿ, ಹೆಂಡತಿ, ಮಕ್ಕಳನ್ನೂ ಮಾತಾಡಿಸಿ ಹುಷಾರಿಲ್ಲದ ತಂದೆಗೆ ಒಂದು ರೂಪಾಯಿ ಕೊಟ್ಟು ಮಾಲಿಕನ ಮನೆಗೆ ಬಂದ.

ಆಮೇಲೆ ಮಾಲಿಕನ ಮನೆ ಹಿಂಬದಿಯಲ್ಲಿರುವ ಸಗಣಿ ಗೊಬ್ಬರವನ್ನು ಎತ್ತಿನಗಾಡಿಗೆ ಹೇರಿ ಗದ್ದೆಗೆ ಸಾಗಿಸುವ ಕೆಲಸಮಾಡುತ್ತಿದ್ದ. ಅವತ್ತು ಮಧ್ಯಾಹ್ನ 3-30 ಕ್ಕೇ ಆತ (ಪುಟ್ಟಸ್ವಾಮಿ) ದನದ ಕೊಟ್ಟಿಗೆಯಲ್ಲೇ ನೇಣು ಬಿಗಿದುಕೊಂಡವನೆ ಎಂಬ ಸುದ್ದಿ ಹರಡಿತು.

ಈ ಸುದ್ದಿ ಹರಡುವ ಮೊದಲು ಜಾಫರ್ ಸಾಬ್‌ರ ಮನೆಯ ನಾಯಿ ಬೆಕ್ಕುಗಳೂ ಕೂಡಾ ಗಾಬರಿ ಬಿದ್ದು ಓಡಾಡುತ್ತಿದ್ದುದೂ, ಪುಟ್ಟಸ್ವಾಮಿಯ ಮನೆಗೆ ಸಂಜೆ 5-30 ಕ್ಕೆ ಸುದ್ದಿ ಹೋಗುವ ಮುನ್ನ ಸಾಬ್‌ರು, ಪೋಲೀಸರು, ಊರ ಛೇರ್‌ಮನ್ ಮತ್ತು ಇತರ ಮುಖಂಡರು ಇತ್ಯಾದಿಗಳನ್ನೆಲ್ಲಾ ಕರೆಸಿ "ಪಿಸಿ ಪಿಸಿ" ಅಂತ ಮಾತುಕತೆಯಾಡಿದ್ದು ಎಲ್ಲವೂ ಕೊಡ್ಲಿಪೇಟೆಯಲ್ಲೆಲ್ಲಾ ಗುಲ್ಲಾಗಿರುವ ವಿಷಯ.

ಮೊದಲೇ ಸಾಬ್‌ರಿಂದ ಮೇಯ್ದ ಪೋಲೀಸರು ಪುಟ್ಟಸ್ವಾಮಿಯ ಮನೆಯವರಿಗೆ ತಕ್ಷಣ ಹೆಣ ನೋಡಲೂ ಅವಕಾಶ ಕೊಡಲಿಲ್ಲ. ಅಷ್ಟರಲ್ಲಿ ಗಂಟೆ 8 ಆಗಿತ್ತು. ಪೋಲೀಸರು ಕೆಲವರಿಗೆ ಗದರಿಸಿ ಹೆಣವನ್ನು ಆಗ ಆಸ್ಪತ್ರೆಗೆ ಸಾಗಿಸಿದರು. ಆಸ್ಪತ್ರೆಯ ಡಾಕ್ಟರು ಆಗ ಯಾಕೋ ಹಾಸನಕ್ಕೆ ಓಡಿದ್ದರು. ಶವದ ಕೋಣೆಗೆ ಇಬ್ಬರು ಪೋಲೀಸರನ್ನು ಭದ್ರ ಕಾವಲಿಗೆ ಹಾಕಿ ಬೀಗವನ್ನು ಜಡಿಯಲಾಯಿತು.

ಬೆಳಿಗ್ಗೆ ಬಂದ ಡಾಕ್ಟರು ಸತ್ತವನನ್ನು ಬಯ್ಯುತ್ತಾ, ಪರೀಕ್ಷೆ (?) ನಡೆಸಿ 'ಯಾಕಾರು ನೇಣು ಹಾಕಿಕೊಂಡನೋ' ಎಂದು "ಹೆಣವನ್ನು ಸುಟ್ಟುಬಿಡಿ" ಎಂದರು. ಆದರೆ ಕೆಲವು ಗೆಳೆಯರು ಸೇರಿ ಅತ್ಮಹತ್ಯೆ ಬಗ್ಗೆ ಸಂಶಯ ಬಂದಿದ್ದರಿಂದ ಶವವನ್ನು ಹೂಳಲು ತೀರ್ಮಾನಿಸಿದರು.

ಪುಟ್ಟಸ್ವಾಮಿ ಇದ್ದಕ್ಕಿದ್ದಂತೆಯೇ ಆತ್ಮಹತ್ಯೆ ಮಾಡಿಕೊಳ್ಳಲು ಯಾವ ಕಾರಣಗಳೂ ಇಲ್ಲ. ಮಾಲೀಕನ ಕಡೆಯವರು ನೀಡಿದ ಪ್ರಾಣ ಹೋಗುವಂತಹ ಪೆಟ್ಟುಗಳು ಅವನ ಸಾವಿಗೆ ಕಾರಣವಾಗಿದೆ. ಆಮೇಲೆ ಅವನು ನೇಣು ಹಾಕಿಕೊಂಡ ರೀತಿಯಲ್ಲಿ ಹಗ್ಗವನ್ನು ಕುತ್ತಿಗೆಗೆ ಕಟ್ಟಿ ನೇಣು ಹಾಕಿದಂತೆ ಮಾಡಲಾಗಿತ್ತು ಎಂದು ಜನ ಮಾತಾಡಿ ಕೊಳ್ಳುತ್ತಿದ್ದಾರೆ.

ಪುಟ್ಟಸ್ವಾಮಿಯು ಪೆಟ್ರೋಲನ್ನು ಕಮ್ಮಿ ತಂದಿದ್ದಾನೆಂತಲೂ, ಪೆಟ್ರೋಲಿಗೆ ನೀರು ಬೆರೆಸಿದ್ದಾನೆಂತಲೂ, ಮೋಟಾರ್ ಸೈಕ್ಲಿಗೆ ಹಾಕಿದಾಗ ಸ್ಟಾರ್ಟ್ ಆಗಲಿಲ್ಲವೆಂತಲೂ ಜಾಫರ್‌ನ ಮಗ ಮತ್ತು ಅಳಿಯ ಪುಟ್ಟಸ್ವಾಮಿಯ ಜೊತೆ ಜಗಳವಾಡಿ ಹೊಡೆದು ಈ ರೀತಿ ಮಾಡಿದ್ದಾರೆಂದು ಅಲ್ಲಿಯ ಜನ ಹೇಳುತ್ತಿದ್ದಾರೆ.

ಪುಟ್ಟಸ್ವಾಮಿಯ ಹೆಂಡತಿಯ ಅಣ್ಣ ನಿಂಗಯ್ಯ ಶವ ಪರೀಕ್ಷೆಯಾಗಬೇಕೆಂದು ಅಸಿಸ್ಟೆಂಟ್ ಕಮಿಷನರಿಗೆ ಅರ್ಜಿ ಕೊಟ್ಟು ಬಂದ ಮೇಲೆ ಮೃತನ ಕುಟುಂಬಕ್ಕೆ 4, 000 ರೂಪಾಯಿ ಕೊಡುವುದಾಗಿಯೂ ಅರ್ಜಿಯನ್ನು ವಾಪಸ್ ತೆಗೆದುಕೊಳ್ಳಬೇಕೆಂತಲೂ ಸಾಬ್‌ರ ಕಡೆಯ ಚೇಲಾ ಒಬ್ಬ ಒತ್ತಾಯಿಸಿದ.

ಈಗಾಗಲೇ ಜಾಫರ್‌ಸಾಬ್‌ನ ಹೇಲು ತಿಂದ ವೈದ್ಯರು ಮರು ಪರೀಕ್ಷೆಯ ನಂತರ ನಿಜವಾದ ವರದಿ ಕೊಡುವುದಿಲ್ಲ ಎಂದು ಗೊತ್ತಾಗಿ ದಲಿತ ಸಂಘರ್ಷ ಸಮಿತಿಯು ಸಿ. ಓ. ಡಿ ತನಿಖೆಯೇ ನಡೆಯಬೇಕೆಂದು ಒತ್ತಾಯಿಸಿದೆ

—ಜಯಪ್ಪ ಹಾನಗಲ್

# ವಿಧವೆ ವೆಂಕಟಮ್ಮನ ಮೇಲೆ ಅತ್ಯಾಚಾರ !

ಸಾಮಾನ್ಯ ಕೂಲಿಯ ಕುಟುಂಬದಲ್ಲಿ ಹುಟ್ಟಿದ ವೆಂಕಟಮ್ಮ ೨೫ ವರ್ಷದ ವಿಧವೆ. ಗಂಡನ ಕಳೆದುಕೊಂಡ ನಂತರ ಈಕೆಯೆ ಸಂಸಾರದ ಸಂಪೂರ್ಣ ಭಾರ ಹೊರಬೇಕಾಗಿದೆ. ಇಂತಹ ಜವಾಬ್ದಾರಿ ಕಂಡು ಜರಿಯುವರೆ ಹೆಚ್ಚು ! ಇದೊಂದು ಪುರುಷ ಪ್ರಧಾನ ಇಂಡಿಯಾ ಅಲ್ಲವೆ ? ದಿನಾಂಕ ೨೮-೨-೮೨ರಂದು ಗೊರ್ರಲಕೊಂಡ ಎಂಬ ಕಾಡಿಗೆ ಸೌದೆ ತರಲು ಬಿಸಿಲಿನಲ್ಲಿ ಬೆವತು ಹೋದ ಚಿಕ್ಕಬಳ್ಳಾಪುರದಲ್ಲಿರುವ ಚಾಮರಾಜ ಪೇಟೆ ಕಾಲೋನಿಯ ಮಹಿಳೆ. ಸೌದೆ ತರಲು ಹೋದವಳ ಮೇಲೆ ಕಾಮುಕ ರಾಕ್ಷಸನಾದ ದೇವರಾಜ್ ಎಂಬುವನು ತನ್ನ ಅನುಯಾಯಿ ಕಾಮುಕನಾದ ರಾಮಕೃಷ್ಣನ ಸಹಾಯ ಪಡೆದು ಬಲತ್ಕಾರವಾಗಿ ಅತ್ಯಾಚಾರ ಮಾಡಿದ್ದಾನೆ.

ಅತ್ಯಾಚಾರಕ್ಕೆ ಮುನ್ನ ನಡೆದ ಪ್ರಸಂಗವೆಂದರೆ, ವೆಂಕಟಮ್ಮನ ಜೊತೆಗಿದ್ದ ಬಾಲಕ ಬಾಲಕಿಯರು ದಣಿವಿನಿಂದ ನೀರು ಕುಡಿಯಲು ಹೋದ ಮರುಗಳಿಗೆ, ಹೊಂಚು ಕಾಯುತ್ತ ಕುಳಿತ ಕಾಮುಕರು, ಸೌದೆ ಹೊರೆ ಕಟ್ಟುತ್ತಿದ್ದ ವೆಂಕಟಮ್ಮನ ಬಳಿಗೆ ಬಂದು, ಅತ್ಯಾಚಾರ ಮಾಡಿದ್ದಾನೆ. ಮತ್ತಷ್ಟು ಚೀರಾಟ ಮಾಡಿದ ವೆಂಕಟಮ್ಮನ ಧ್ವನಿ ಕೇಳಿದ ಅಪರಿಚಿತ ವ್ಯಕ್ತಿ ಧ್ವನಿ ಕಂಡ ಸ್ಥಳಕ್ಕೆ ಧಾವಿಸಿದಾಗ ಅಪರಾಧಿ ಕೂಡಲೆ ಎದ್ದು ಓಡತೊಡಗಿದ್ದಾನೆ.

ಈ ವಿಷಯ ತಿಳಿದ ದ.ಸಂ.ಸ. ಕಾರ್ಯಕರ್ತರು ಸ್ಥಳಕ್ಕೆ ಧಾವಿಸಿ, ಕೆಲವು ಕಾರ್ಯಕರ್ತರೊಂದಿಗೆ ಪೋಲೀಸ್ ಠಾಣೆಯಲ್ಲಿ ಕೇಸು ದಾಖಲಿಸಿದರು. ಪೋಲೀಸರು ಸಕ್ರಿಯವಾಗಿ ಕಾರ್ಯನಿರತರಾಗದೆ ಹೋದ ಅವರ ನೀಚತನದಿಂದ, ಕಾರ್ಯಕರ್ತರು ಆ ರಾತ್ರಿ ಪೂರ್ಣ ಕಾಡಿನಲ್ಲಿದ್ದು ಅಪರಾಧಿಗೆ ಬೆಂಬಲಿಗನಾದ ರಾಮಕೃಷ್ಣನನ್ನು ಬಂಧಿಸಿ ತಂದು ಠಾಣೆಗೆ ಒಪ್ಪಿಸಿದರು—ಮೂಲ ಅಪರಾಧಿ ತಲೆ ಮರೆಸಿಕೊಂಡಿದ್ದರಿಂದ ಪೋಲೀಸರಷ್ಟೇ ಶ್ರಮ ವಹಿಸಿ ಅಪರಾಧಿಯನ್ನು ಹಿಡಿಯಲು ದುಡಿಯತೊಡಗಿದ ನಂತರ ಪೋಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಹಾಗೂ ಎಸ್.ಪಿ.ಯವರು ಬಂಧಿಸಲು ಪ್ರಯತ್ನಿಸಿ ೧೦ ದಿನಗಳ ನಂತರ ಬಂಧಿಸಿದ್ದಾರೆ. ಆ ನಂತರ ಅವನ ಉಡುಪು ಇತ್ಯಾದಿ ಅತ್ಯಾಚಾರಕ್ಕೆ ಸಂಬಂಧ ಪಟ್ಟ ವಸ್ತುಗಳನ್ನು ವೈದ್ಯಪರೀಕ್ಷೆಗೆ ಕಳುಹಿಸಿದ್ದಾರೆ. ನ್ಯಾಯಾಲಯದಲ್ಲಿ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ.

**ಚಂದಾದಾರರ ಗಮನಕ್ಕೆ :**

ಚಂದಾ ಮುಗಿದಿರುವವರು ಕೂಡಲೆ ಚಂದಾ ಹಣ ಕಳಿಸುವುದರ ಮೂಲಕ ತಮ್ಮ 'ಪಂಚಮ' ವನ್ನು ಉಳಿಸಿ ಬೆಳೆಸಿರಿ ಎಂದು ವಿನಂತಿಸುತ್ತೇವೆ. —ಸಂ.

ವಾರ್ಷಿಕ ಚಂದಾ : 10ರೂ.
ಆಜೀವ ಚಂದಾ : 200ರೂ.

# ಕೊಡಗಿನ ಅಸಹಾಯಕಳ ಭೂ ಹೋರಾಟದ ಕಥೆ

ಹೆಚ್. ಕೆ. ಕೇಶವಯ್ಯ
ಎಂ. ಪಳನಿಯಪ್ಪ

ಸಿಂಗಾರಿ, ದಿವಂಗತ ಏಲಕ್ಕಿಯ ಪತ್ನಿ ಕೊಡಗಿನ ಹೆಬ್ಬಾಲೆ ನಿವಾಸಿ. ಜಾತಿಯಲ್ಲಿ ದಲಿತಳು. ಈ ಹಿಂದೆ ಸ್ವಯಾರ್ಜಿತಆಸ್ತಿ, ಎಂದರೆ ಇಬ್ಬರು ಮಕ್ಕಳು, ೩ ಎಕರೆ, 60 ಸೆಂಟು ಭೂಮಿ. ಇಬ್ಬರು ಮಕ್ಕಳ ಹೆಸರು ಹನುಮ, ತಿಮ್ಮ. ಭೂಮಿಯನ್ನು ಉತ್ತು ಬಿತ್ತು ಬೆಳೆಯಲು ಸೋಮಪ್ಪ ಗೌಡರಿಂದ ತನ್ನ ಜಮೀನನ್ನು ಭೋಗ್ಯಕ್ಕಿಟ್ಟು ಪಡೆದಿದ್ದು ೩೦೦ ರೂಗಳು. ಅನಂತರ ಒಂದರಮೇಲೊಂದು ಬಂದ ಸಂಕಷ್ಟಗಳಿಗಾಗಿ ಪುನಃ ಒಮ್ಮೆ ನಾಲ್ಕು ನೂರು ಮತ್ತೊಮ್ಮೆ ೨೦೦ ಹೀಗೆ ಒಟ್ಟು ಸಾವಿರ ರೂಪಾಯಿನಷ್ಟು ಪಡೆದಿದ್ದರು: ಈ ಮಧ್ಯೆ ಸೋಮಪ್ಪ ಗೌಡರು ಸಿಂಗಾರಮ್ಮನ ಮನವೊಲಿಸಿ ನಂಬಿಸಿ ಕ್ರಯಪತ್ರ ಬರಿಸಿಕೊಂಡರು. ತಾನು ಕೊಟ್ಟ ಸಾವಿರ ಹಿಂತಿರುಗಿಸಿದಾಗ ಯಾವಾಗೆಂದರೆ ಆಗ ಕ್ರಯ ಪತ್ರ ವಾಪಸ್ಸು ಮಾಡುವ ಪತ್ರವನ್ನು ಬರೆದು ಕೊಟ್ಟಿದ್ದಾರೆ. ಆಗ ಕ್ರಯಪತ್ರಕ್ಕೆ ಸಹಿ ಮಾಡಿದ ಮಗ ಇನ್ನೂ ವಯಸ್ಕನಲ್ಲ. ಇದು ಸುಮಾರು ೧೦ ವರ್ಷದ ಹಿಂದಿನ ಘಟನೆ.

ಈ ನಂತರ ಅಂದರೆ ಇದೇ ವರ್ಷದ ಏಪ್ರಿಲ್ ತಿಂಗಳ ೨೬ ರಂದು ಈ ಭೂಮಿಯನ್ನು ಸಿಂಗಾರಿ ಬಿಡಿಸಿಕೊಳ್ಳಲು ಕೇಳಿದರು. ಸೋಮಪ್ಪಗೌಡರು ಬಹಳ ಪ್ರಾಮಾಣಿಕರಾಗಿ ತಮ್ಮ ಸಾವಿರ ರೂಪಾಯಿ ಕೊಡಲು ಕೇಳಿದರು. ಸಿಂಗಾರಮ್ಮನು ಒಪ್ಪಿಕೊಂಡು, ಇದ್ದ ಎತ್ತುಗಳನ್ನು ಮಾರಿ, ಪರಿಚಯಸ್ಥರಿಂದಲೂ ಐನೂರು ರೂ. ಗಳನ್ನು ಹೊಂದಿಸಿಕೊಂಡು ಮಾರನೆಯ ಬೆಳಿಗ್ಗೆ ತಮ್ಮ ಜಮೀನನ್ನು ವಾಪಸ್ಸು ಪಡೆಯಲು ಹೊರಟರು. ಹಣಕೊಟ್ಟು ಕ್ರಯ ಪತ್ರ ಕೇಳಿದಾಗ ತಾವು ಕೊಟ್ಟ ಹಣಕ್ಕೆ ಇಲ್ಲಿಗೆ ಕನಿಷ್ಠ ಸಾವಿರ ರೂಪಾಯಿ ಯಾದರೂ ಬಡ್ಡಿ ಸೇರಿದೆ. ಆದ್ದರಿಂದ ಆ ಹಣಕೊಟ್ಟಲ್ಲಿ ಮಾತ್ರ ವಾಪಸ್ಸು ಕೊಡಲು ಸಾಧ್ಯ ಎಂದು ತಿರಸ್ಕರಿಸಿದರು. ಈ ಮಾತು ಸಿಂಗಾರಮ್ಮನಿಗೆ ದಿಗ್ಭ್ರಮೆ ಉಂಟು ಮಾಡಿತು. ಈ ಮಧ್ಯೆ ಜಮೀನಿನಲ್ಲಿ ಕೆಲಸ ಮಾಡಲು ಹೊರಟಿದ್ದ ಮಗ ತಿಮ್ಮ ಬದುವನ್ನು ಹಾಕಲು ಪ್ರಾರಂಭಿಸಿದ್ದನು. ಅಲ್ಲಿಗೆ ಆಗಮಿಸಿದ ಸೋಮೇಗೌಡರು, ತಡೆದು, ಬೆದರಿಸಿದರು. ತಾಯಿ ಸಿಂಗಾರಮ್ಮ ಇದನ್ನು ಕಂಡುಗೋಳಾಡುತ್ತ ಪ್ರತಿಭಟಿಸಿದಳು. ಮಕ್ಕಳೂ ಇದನ್ನು ಪ್ರತಿಭಟಿಸಿದಾಗ, ಸೋಮಪ್ಪಗೌಡರು, ಏಕಾಂಗಿಯಾಗಿ ಬಂದಿದ್ದರೂ ಕೂಡ ಸನ್ನೆ ಮಾಡಿದ ತಕ್ಷಣ ಏಕಾಏಕಿ ಆರವತ್ತು ಜನರ ಗುಂಪು ಸೇರಿಕೊಂಡಿತು. ಇವರೆಲ್ಲರ ಬಳಿಯೂ ತಮ್ಮದೇ ಆದ ಆಯುಧಗಳಿದ್ದವು. ಅವುಗಳು ಗುದ್ದಲಿ, ಹಾರೆ, ಮಚ್ಚು, ದೊಣ್ಣೆ, ಕಲ್ಲು ಮುಂತಾದವುಗಳು. ತಿಮ್ಮನ ಎರಡೂ ಕೈಗಳಿಗೂ ಹಾರೆ ಮಚ್ಚಿನಿಂದ ಹೊಡೆತ, ಕತ್ತಿನ ಹಿಂಭಾಗಕ್ಕೆ ಕಲ್ಲಿನಿಂದ ಪೆಟ್ಟು ಬಿದ್ದು ಪ್ರಜ್ಞೆ ತಪ್ಪುವಂತಾಯಿತು. ಹನುಮನ ಕೈಗಳಿಗೆ ಹಾರೆ. ಗುದ್ದಲಿಯ ಹೊಡೆತ ಬಿದ್ದು ನಿಶಕ್ತನಾಗಿ ಪ್ರಜ್ಞಾ ಹೀನನಾದ. ಸಿಂಗಾರಮ್ಮನೂ ಕೂಡ ಸಾಕಷ್ಟು ಪೆಟ್ಟು ತಿಂದಳು. ಈ ಸುದ್ದಿ ತಿಳಿದು ಓಡಿಬಂದ ಕೂಡ ಮಗಳ ಮೇಲೂ ಹಲ್ಲೆ ನಡೆಸಿದರು. ಸಿಂಗಾರಿಯ ತಮ್ಮನ ಸ್ಥಿತಿಯಂತೂ ಎಲ್ಲರ ಧಾಳಿ, ಪೆಟ್ಟು ಮಚ್ಚಿನ ಕಲ್ಲಿನ ಹೊಡೆತದಿಂದ ಶೋಚನೀಯವಾಯಿತು. ಈ ಹಲ್ಲೆ ನಡೆಯುತ್ತಿದ್ದಂತೆಯೇ ಸೋಮಪ್ಪಗೌಡರ ಸೂಚನೆಯಂತೆ ಗೌಡರ 'ಕಡೆಯ ಒಬ್ಬ ವ್ಯಕ್ತಿ ಕುಶಾಲನಗರಕ್ಕೆ ಧಾವಿಸಿ ಆರಕ್ಷಕರಿಗೆ ದೂರು ನೀಡಿ ಆರಕ್ಷಕರೊಂದಿಗೆ ಹಲ್ಲೆಯ ಸ್ಥಳಕ್ಕೆ ಬಂದರು. ಅಲ್ಲಿಗೆ ಬಂದ ಆರಕ್ಷಕದಳದವರು ಹಲ್ಲೆಗೊಳಗಾದ ವ್ಯಕ್ತಿಗಳನ್ನು ದವಾಖಾನೆಗೆ ಸಾಗಿಸಿ ಚಿಕಿತ್ಸೆಗೆ ಏರ್ಪಾಟು ಮಾಡಿದರು ಈ ಸಂದರ್ಭದಲ್ಲಿ ಸಿಂಗಾರಮ್ಮನ ಮಕ್ಕಳನ್ನು ದವಾಖಾನೆಯಲ್ಲಿಯೇ ಉಳಿಸಿ ಠಾಣೆಗೆ ಧಾವಿಸಿ ತಮಗೆ ನ್ಯಾಯ ದೊರಕಿಸಲು ಬೇಡಿದಳು: ಅತ್ತಳು, ಗೋಳಾಡಿದಳು, ಗೋಗರೆದಳು, ಎಲ್ಲವೂ ವ್ಯರ್ಥಪ್ರಯತ್ನವಾಯಿತು.

ಹಲ್ಲೆ ನಡೆಸಿದವರೇ ದೂರುಕೊಟ್ಟು, ಈ ಆಕ್ರಮಣವನ್ನು ಮುಚ್ಚುವ ಯತ್ನ ನಡೆದಿದೆ. ಆರಕ್ಷಕ ಮುಖ್ಯರು ಹೆಚ್ಚು ಆಸಕ್ತಿ ಹೊಂದದೆ ಇರುವುದು ಸೋಮಪ್ಪ ಗೌಡರ ಪ್ರಭಾವವನ್ನು ಸೂಚಿಸುತ್ತದೆ. ಈ ಮಧ್ಯೆ ಸಿಂಗಾರಮ್ಮ, ಜಿಲ್ಲಾ ಮುಖ್ಯಾಧಿಕಾರಿಗೆ, ಸೂಪರಿಂಟೆಂಡೆಂಟ'ರವರಿಗೆ ನಿವೇದಿಸಿಕೊಂಡಿದ್ದಾರೆ. ಬಾಯಿಮಾತಿನ ಸಮಾಧಾನ ಹೊರತು ಯಾವುದೇ ರೀತಿಯ ಕ್ರಮ ಕೈಗೊಂಡಿಲ್ಲ. ಸಿಂಗಾರಮ್ಮನ ಸಾವಿರ ರೂಪಾಯಿಯೂ ಅನ್ಯಾಯದಕ್ರಯಪತ್ರವೂ ಸೋಮಪ್ಪಗೌಡರ ಜೇಬಲ್ಲಿ ಭದ್ರವಾಗಿದೆ !—ಹೀಗಿದೆ.

## "ಭೀಮ ಸೇನೆ"

[11ನೇ ಪುಟದಿಂದ]

ವನ್ನು ನಿರ್ಮಿಸಬೇಕೆಂಬುದೇ ಭೀಮ ಸೇನೆಯ ಗುರಿಯಾಗಿತ್ತು,

**ದ.ಸಂ.ಸ. :** ಇಷ್ಟೆಲ್ಲಾ ಒಳ್ಳೆಯ ವಿಚಾರಗಳನ್ನಿಟ್ಟುಕೊಂಡು ಅಸ್ಪೃಶ್ಯರ ಮುಕ್ತಿಗಾಗಿ, ಸಮತಾ ರಾಜ್ಯಕ್ಕಾಗಿ ಹೋರಾಟ ಮಾಡುತ್ತಿದ್ದ ಭೀಮ ಸೇನಾ ಚಳವಳಿ ಏಕೆ ಹಾಳಾಯಿತು ?

**ಭೀ.ಸೇನೆ :** ಹಿಂದುಗಳೂ ಬಹಳಷ್ಟು ಕಾರಣಗಳಿಂದ ಅಸ್ಪೃಶ್ಯರನ್ನು ದಮನ ಮಾಡಿದ್ದಾರೆ. ಪೋಲೀಸರೂ ಮತ್ತು ನ್ಯಾಯಧೀಶರು ಹಿಂದುಗಳೇ ಆಗಿರುವುದರಿಂದ, ಅಸ್ಪೃಶ್ಯರ ಮತ್ತು ಹಿಂದುಗಳ ನಡುವೆ ಘರ್ಷಣೆಗಳಾದಾಗ ಅಸ್ಪೃಶ್ಯರು ಎಂದಿಗೂ ನ್ಯಾಯವನ್ನು ಪಡೆಯುವುದಿಲ್ಲ. ಇದಕ್ಕೆ ಕಾರಣ ಹಿಂದೂ ಮನಸ್ಸಿನ ಪೋಲಿಸರು ಮತ್ತು ನ್ಯಾಯಾಧೀಶರು ತಮ್ಮ ಕರ್ತವ್ಯಕ್ಕಿಂತ ತಮ್ಮ ಜಾತಿಗೇ ಹೆಚ್ಚು ಬೆಲೆ ಕೊಡುತ್ತಿದ್ದುದು. ಆದ ಕಾರಣ ಅವರ ಹಿಂದೂ ಧರ್ಮ ವಿರೋಧಿಯಾದ ಈ ಚಳವಳಿಯನ್ನು ನಾಶ ಮಾಡಲು ಹೊಂಚು ಹಾಕುತ್ತಿದ್ದರು. ಅಷ್ಟರಲ್ಲಿಯೇ ಭೀಮ ಸೇನೆಯ ಧೀಮಂತ ನಾಯಕರಾದ ದಿ.ಶಾಮಸುಂದರ್ ಸಾಹೇಬರು ಮರಣವನ್ನಪ್ಪಿದರು. ಈ ಸಂದರ್ಭದ ಉಪಯೋಗ ಪಡೆದುಕೊಂಡು, ಹಿಂದುಗಳು ಭೀಮಸೇನೆಯ ಕಾರ್ಯಕರ್ತರಿಗೆ ಹಣ, ಅನ್ನ, ಬಟ್ಟೆಗಳ ಆಮಿಷಗಳನ್ನು ತೋರಿಸಿ ಭೀಮಸೇನೆಯ ಒಡಕಿಗೆ ಕಾರಣರಾದರು. ಸರಕಾರಿ ಸೇವೆಯಲ್ಲಿದ್ದ 'ಭೀಮಸೇನೆ'ಯ ಕಾರ್ಯಕರ್ತರಿಗೆ ವರ್ಗ ಮಾಡಲಾಯಿತು. ಭೀಮಸೇನೆಯ ಸಿದ್ಧಾಂತವನ್ನು ನಂಬಿ ಅಸ್ಪೃಶ್ಯರ ವಿಮೋಚನೆಗಾಗಿ ಸರ್ವಸ್ವವನ್ನೆ ತ್ಯಾಗ ಮಾಡಿ ಕೆಲಸ ಮಾಡುತ್ತಿರುವ ಕೆಲವು ನಿಷ್ಠಾವಂತ ಕಾರ್ಯಕರ್ತರು ಇದರಿಂದಾಗಿ ನಿರಾಶೆ ಹೊಂದಿದರು. ಹೀಗಾಗಿ ಭೀಮಸೇನಾ ಚಳವಳಿ ಬಹಳ ಕಡೆ ಕ್ಷೀಣಿಸುತ್ತಾ ಹೋಯಿತಾದರೂ, ಮಹಾರಾಷ್ಟ್ರದ ನಾಂದೇಡದಲ್ಲಿ ಇನ್ನೂ ಜೀವಂತವಿದೆ, ಕ್ರಿಯಾತ್ಮಕವಾಗಿ ಕೆಲಸ ಮಾಡುತ್ತಿದೆ.

# ಪ್ರಿಂಟರ್ಸ್ ಪ್ರಕಾಶನ

16 ಮಹಾತ್ಮಗಾಂಧಿ ರಸ್ತೆ, ಬೆಂಗಳೂರು-560 001

ಕನ್ನಡದಲ್ಲಿ ಉತ್ತಮ ಹಳೆಯ-ಹೊಸ ಲೇಖಕರ ಕಥೆ, ಕಾದಂಬರಿ, ನಾಟಕ, ಮಕ್ಕಳ ಸಾಹಿತ್ಯ, ವಿಚಾರ ಸಾಹಿತ್ಯ, ಬೇರೆ ಭಾಷೆಗಳ ಅನುವಾದಿತ ಕೃತಿಗಳು, ವಿಜ್ಞಾನ, ಮಾನವಿಕ ಶಾಸ್ತ್ರ ಇತ್ಯಾದಿ ಪುಸ್ತಕಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ಕೊಡುವ ಹೊಸ ಪ್ರಕಾಶನ ಸಂಸ್ಥೆ. ಮೊದಲ ಪ್ರಕಟಣೆಗಳು ಸಧ್ಯದಲ್ಲೇ ಮಾರುಕಟ್ಟೆಗೆ ಬರಲಿವೆ.



ಮಾಲೀಕರು: ದಿ ಪ್ರಿಂಟರ್ಸ್ (ಮೈಸೂರು) ಲಿಮಿಟೆಡ್.

# ಕೈಯಿಂದ ತುತ್ತುಕಿತ್ತ ಎಡ—ಬಲ ಜಾತಿ ಕಂದಕ!

ಜಾತಿ. ಎಡ-ಬಲ ಜಾತಿಕಂದಕದೊಳಗೆ ಸಿಕ್ಕಿ ಅವಮಾನಿಸಿಕೊಂಡ ಶ್ರೀಮತಿ ಭಾಗ್ಯಮ್ಮಳ ಯಾತನೆಯನ್ನು ಕೇಳಿ ತತ್ತರಿಸಿಹೋದೆ.

ಭಾಗ್ಯಮ್ಮ ಕುಶಾಲನಗರದ ಕಡೆಯವರು. ಕಳೆದ ಐದಾರು ವರ್ಷಗಳಿಂದ ಪಿರಿಯಾಪಟ್ಟಣದ ರಾಮಪುರ ಕಾಲೋನಿಯ ಬಲಗೈನ ನಂಜಮ್ಮನವರ ಬಾಡಿಗೆ ಮನೆಯಲ್ಲಿ ವಾಸಕ್ಕಿದ್ದರು. ಸ್ನೇಹಿತೆ ನಂಜಮ್ಮನವರ ಹಿರಿಮಗನ ಮದುವೆಗೆ ಬರಲೇಬೇಕೆಂದು ಲಗ್ನಪತ್ರಿಕೆ ಕೊಟ್ಟು ಒತ್ತಾಯಮಾಡಿ ಕರೆದಿದ್ದರಿಂದ ಭಾಗ್ಯಮ್ಮ ನಂಜಮ್ಮಳ ಮಗನ ಮದುವೆಗೆ ಹೋಗಿದ್ದರು. ನೆಂಟರಿಷ್ಟರಿಂದ ತುಂಬಿದ ಚಪ್ಪರದಟ್ಟಿಯೊಳಗೆ ಯಾರೊಬ್ಬರ ಜಾತಿ ಬಣ್ಣಗಳೂ ಕಾಣಿಸದಿದ್ದರೂ, ಭಾಗ್ಯಮ್ಮಳ ನಿಜಜಾತಿ ಕಂಡುಕೊಂಡಿದ್ದ ರಾಮಪುರದ ಯಜಮಾನ, ಅದರಲ್ಲೂ ಕಾಂಗ್ರೆಸ್ ಮನುಷ್ಯ ಹೊಟ್ಟೆರಂಗಯ್ಯನ ನಾಲಿಗೆ ಮದುವೆ ಗಂಡಿನ ತಾಯಿ ನಂಜಮ್ಮಳನ್ನು ಎಲ್ಲರ ಮುಂದೆಯೇ ಕರೆದು ಎಡಗೈ ಭಾಗ್ಯಮ್ಮಳನ್ನು ಮದುವೆಗೆ ಕರೆದಿರುವುದನ್ನು ಅಕ್ಷೇಪಿಸಿ ತನ್ನ ಹಿಂಬಾಲಕರನ್ನು ಸೇರಿಸಿಕೊಂಡು ಚಪ್ಪರದಟ್ಟಿಯಲ್ಲಿ ತರಲೇಮಾಡತೊಡಗಿದನು.

## ದೊಡ್ಡಣ್ಣ

ಇದರಿಂದಾಗಿ ಅವಮಾನ ದುಃಖ ಎರಡನ್ನೂ ನುಂಗಿದ ಭಾಗ್ಯಮ್ಮ ಎಲ್ಲರೊಟ್ಟಿಗೆ ಉಣ್ಣಲು ಕುಳಿತಿದ್ದನ್ನು ಕಂಡ ರಂಗಯ್ಯನ ಕಣ್ಣುಗಳು ಉರಿಯುತ್ತಾ, ಹೊಲಸಾಗಿ ಬೈಯುತ್ತಾ ಭಾಗ್ಯಮ್ಮಳನ್ನು ಪಂಕ್ತಿಯಿಂದಲೇ ಎಬ್ಬಿಸಿ ಅವಮಾನ ಪಡಿಸಿದ. ಅಷ್ಟಕ್ಕೂ ತೃಪ್ತಿಪಡದ ಈ ಧೂರ್ತ ತನ್ನ ಕೀಳುತನವನ್ನು ಪ್ರದರ್ಶಿಸಿ, ಎಡಗೈನವಳಾದ ಭಾಗ್ಯಮ್ಮಳನ್ನು ಮದುವೆಗೆ ಕರೆದಿದ್ದ ಸ್ವಾಭಿಮಾನಿ ನಂಜಮ್ಮಳಿಗೆ ತನ್ನ ಗ್ರಾಮದಲ್ಲಿ ಯಾರೂ ಬೆಂಕಿ, ಬಿಸಿನೀರು ಕೊಡದಂತೆ ಬಹಿಷ್ಕಾರವೆಂಬ ಕಟ್ಟಪ್ಪಣೆ ಕೊಟ್ಟು ಪಾಪದ ಕೆಲಸ ಮಾಡಿರುವ. ಹೊಟ್ಟೆ ರಂಗಯ್ಯನ ನೀಚತನವನ್ನು ಖಂಡಿಸಿ, ತಿಳಿಸಿದ ಕೊಣನೂರಿನ ಕರಿಯಪ್ಪನವರು ತಮ್ಮ ಹರಿತವಾದ ಮಾತುಗಳಲ್ಲಿ ತಿವಿಯುತ್ತಾ, 'ಅಸ್ಪೃಶ್ಯತೆ' ಎಂದು ಮೇಲ್ಜಾತಿ ಜನರ ಬಗ್ಗೆ ಬೆರಳು ಮಾಡಿ ಚಿಂತಿಸುವ ನಾವು ನಮ್ಮಲ್ಲೇ ಎಡಬಲ ಮುಂತಾಗಿ ಜಾತಿ ಸೃಷ್ಟಿಸಿ ತೃಪ್ತಿಪಡುವ ರಂಗಯ್ಯನಂತಹ ನೀಚ ಮನುಷ್ಯರನ್ನು ಸರಿಪಡಿಸದೇ ಮೇಲ್ಜಾತಿ ಅವಮಾನವನ್ನು ಯಾವ ಶಕ್ತಿಯಲ್ಲಿ ಪ್ರತಿಭಟಿಸುವುದು ?—ಎಂದೇಳುತ್ತಾ ನಮ್ಮೆಲ್ಲರ ಮೆದುಳನ್ನು ಕೆದಕಿದ ಕರಿಯಪ್ಪ ಕಾಲ್ಕಿತ್ತರು.

....



## ಜನರನ್ನು ಆವರಿಸಿಕೊಳ್ಳುವ ದಲಿತಕಲಾಮಂಡಲಿ ನಾಟಕಗಳು

ದಲಿತ ಕಲಾಮಂಡಳಿಯ ಹಾಡುನಾಟಕಗಳು ಹಳ್ಳಿ ನಗರಗಳೆನ್ನದೆ ಎಲ್ಲಾ ಜನರನ್ನು ಆವರಿಸಿಕೊಳ್ಳತೊಡಗಿವೆ. ಇತ್ತೀಚೆಗೆ ಮೈಸೂರಿನ ಮಾನಸ ಗಂಗೋತ್ರಿಯ ಹಾಸ್ಟೆಲ್ ವಾರ್ಷಿಕೋತ್ಸವ ಸಂದರ್ಭದಲ್ಲಿ ವಿದ್ಯಾರ್ಥಿಗಳಿಂದ 'ಬೆಲ್ಚಿ' ನಾಟಕ ಅಭಿನಯಿಸಲ್ಪಟ್ಟು, ಮೆಚ್ಚುಗೆ ಗಳಿಸಿತು. ಹಾಸ್ಟೆಲ್‌ನ ವಾರ್ಡನ್, ವಿಚಾರವಾದಿ ಡಾ॥ ಎನ್.ಸುಜೀವಯ್ಯನವರೂ ನಾಟಕದಲ್ಲಿ ಪಾತ್ರಧಾರಿಯಾಗಿದ್ದುದು ನಾಟಕಕ್ಕೆ ವಿಶೇಷತೆ ನೀಡಿತ್ತು. ಜೊತೆಗೆ ಮುಖ್ಯ ಪಾತ್ರಧಾರಿ ಹೆಚ್.ಎಸ್.ರಾಜೇಂದ್ರಸಿಂಗ್, ಕೆ.ಪಿ.ಸುರೇಶ್ ಮತ್ತು ಚಂದ್ರು—ಇವರನ್ನು ಚಿತ್ರದಲ್ಲಿ ಕಾಣಬಹುದು. ಈ ನಾಟಕದ ನಿರ್ದೇಶಕರು ವಿದ್ಯಾರ್ಥಿ ನಾಯಕರಾದ ಸಣ್ಣಯ್ಯ ಮತ್ತು ವರದಯ್ಯನವರು.

## 'ಸತ್ತದನು ತಿಂಬಾತ'

ವಚನಕಾರರಂತೆ ಸರ್ವಜ್ಞನೂ ತನ್ನಕಾಲದ ಮಲಿನಗೊಂಡ ಸಮಾಜದ ಕ್ಷುದ್ರತೆಗಳನ್ನು ಕಂಡು ವ್ಯಾಕುಲತೆಯಿಂದ, ಉಗ್ರವಾಗಿ ಖಂಡಿಸಿದ್ದಾನೆ. ಇದರ ಜೊತೆಗೆ ಸಮಾಜ ವ್ಯವಸ್ಥೆಯಲ್ಲಿ ಮನುಷ್ಯ-ಮನುಷ್ಯರ ಸಂಬಂಧಗಳಲ್ಲಿ ಕಂದಕವನ್ನುಂಟು ಮಾಡುವ ವರ್ಣ ಜಾತಿ ಪದ್ಧತಿಗಳ ಅಮಾನುಷ ಆಚರಣೆಯ ವಿರುದ್ಧ ನೇರವಾಗಿ ಸಿಡಿದಿದ್ದಾನೆ.

ಸತ್ತದನು ತಿಂಬಾತ ಎತ್ತಣದ ಹೊಲೆಯನು
ಬತ್ತಿ ಜೀವವನು ಕೊಚಿ ಕೊಚಿದು ತಿಂಬಾತ
ನುತ್ತಮದ ಹೊಲೆಯ ಸರ್ವಜ್ಞ ॥

ಉತ್ತಮದ ವರ್ಣಗಳನುತ್ತಮರೆನಬೇಡ
ಮತ್ತೆ ತನ್ನಂತೆ ಬಗೆವನೆಲ್ಲರ
ನುತ್ತಮರೆನ್ನು ಸರ್ವಜ್ಞ ॥

ಕೊಂದು ತಿನ್ನುವ ಹೊಲೆಯನೆಂದು ನೀನೆನಬೇಡ
ನೊಂದ ಜೀವವನು ತಾನ್ನರಿವ ಹಾರವನು
ಕೊಂದಿದ ಹೊಲೆಯ ಸರ್ವಜ್ಞ ॥

ಮಲವು ದೇಹದಿ ಸೋರಿ ಹೊಲಸು ಮಾಂಸವು ನಾರಿ
ಹೊಲೆಬಿಲದ ಹೇಹ ದೇಹದಲಿ ಹಾರುವರು
ಕುಲವನೆಣಿಸುವರು ಸರ್ವಜ್ಞ ॥

ಇಂತಹ ಸರ್ವಜ್ಞನ ವಚನಗಳಿಂದ ಒಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿನ ಜಡ ಮೌಲ್ಯಗಳ ವಿರುದ್ಧ, ತೀವ್ರ ಅಸಮಧಾನ, ರೊಚ್ಚುಗಳನ್ನು ಗ್ರಹಿಸಬಹುದು.

ಜಿ. ವಿ. ಆನಂದಮೂರ್ತಿ

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ವಿನ್ಯಾಸ ಪ್ರಿಂಟರ್ಸ್, ಮೈಸೂರು-9 ಇಲ್ಲಿ ಮುದ್ರಿಸಲ್ಪಟ್ಟು ಎಚ್.ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ: ಮಾಸ್ತಿಗುಡಿ, 2ನೇ ಕ್ರಾಸ್, ಅಶೋಕಪುರಂ, ಮೈಸೂರು–570008.